ಸದರೀ ನೋಟೀಸು ತಲುಪಿದ ಏಳು(7) ದಿನಗಳೊಳಗಾಗಿ ಈ ಕಛೇರಿಗೆ ಸಲ್ಲಿಸುವಂತೆ ನಿರ್ದೇಶಿಸಲಾಗಿತ್ತು. ಆದರೆ ಸದರೀ ನೋಟೀಸು ಸ್ವೀಕೃತಗೊಳ್ಳದೇ ಅಂಚೆ ಇಲಾಖೆಯಿಂದ ಹಿಂದಿರುಗಿಸಲ್ಪಟ್ಟಿರುವುದರಿಂದ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72(2)ರ ರೀತ್ಯಾ ಹೊರಡಿಸಿರುವ ಉಲ್ಲೇಖ (2)ರಲ್ಲಿ ಕಾಣಿಸಿರುವ ದಿನಾಂಕ: 13-12-2005ರ ಆದೇಶದನ್ವಯ ಮೇಲ್ಕಂಡ ಸಹಕಾರ ಸಂಘವನ್ನು ಸಮಾಪನೆಗೊಳಿಸಿ ಆದೇಶಿಸಿದ್ದು, ಸದರೀ ಕಾಯ್ದೆಯ ಕಲಂ 73ರನ್ವಯ ಸಹಕಾರಿ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಹೆಚ್ಚುವರಿ ಪ್ರಭಾರದಲ್ಲಿ ನೇಮಕ ಮಾಡಲಾಗಿತ್ತು.

ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು ಹಾಗೂ ಸಂಘದ ಸಮಾಪನಾಧಿಕಾರಿಯವರು ಉಲ್ಲೇಖ (3)ರಲ್ಲಿ ಕಾಣಿಸಿರುವ ಅವರ ದಿನಾಂಕ:01-03-2006ರ ಪತ್ರದಲ್ಲಿ ದಿನಾಂಕ:10-01-2006ರಂದು ಮೇಲ್ಕಂಡ ಸಹಕಾರ ಸಂಘದ ಸಮಾಪನಾಧಿಕಾರಿಯ ಪ್ರಭಾರವನ್ನು ವಹಿಸಿಕೊಂಡಿರುವುದಾಗಿ ತಿಳಿಸಿರುತ್ತಾರೆ. ಅವರು ಮುಂದುವರಿದು, ಸಂಘದಲ್ಲಿರುವ ಲೆಕ್ಕ ಪುಸ್ತಕಗಳನ್ನು ಪರಿಶೀಲಿಸಲಾಗಿ ಸಂಘದ ಲೆಕ್ಕ-ಪುಸ್ತಕಗಳು 2004-05ನೇ ಸಾಲಿನವರೆಗೆ ಲೆಕ್ಕಪರಿಶೋಧನೆಯಾಗಿದ್ದು, ತದನಂತರ ಸಂಘದ ಲೆಕ್ಕಪುಸ್ತಕಗಳನ್ನು ಸಂಘದಲ್ಲಿ ನಿರ್ವಹಿಸಿದ್ದು, ಸಂಘವು ಪ್ರತಿವರ್ಷ ವಾರ್ಷಿಕ ಸರ್ವಸದಸ್ಯರ ಮಹಾಸಭೆಯನ್ನು ನಡೆಸಿರುವುದಾಗಿ ತಿಳಿಸಿರುತ್ತಾರೆ. ಸಂಘದ ಹಿಂದಿನ ಆಡಳಿತ ಮಂಡಳಿಯು ಆಗಿಂದಾಗ್ಗೆ ಆಡಳಿತ ಮಂಡಳಿ ಸಭೆಯನ್ನು ನಡೆಸಿದ್ದು, ತಹಲ್‌ವರೆವಿಗೂ ಸಭೆಯ ನಡವಳಿಗಳನ್ನು ದಾಖಲಿಸಿರುವುದಾಗಿ ಅವರು ತಿಳಿಸಿರುತ್ತಾರೆ. ಈ ಸಹಕಾರ ಸಂಘವು ಹಾಲಿ ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯಲ್ಲಿ ಪಡಿತರ ವ್ಯಾಪಾರ ವಹಿವಾಟನ್ನು ಪರವಾನಗಿ ಸಂಖ್ಯೆ 230ರಲ್ಲಿ 19-12-2005ರವರೆಗೆ ಸತತವಾಗಿ ನಿರ್ವಹಿಸಿಕೊಂಡು ಬಂದಿದ್ದು, ಹಾಲಿ ಕಾರ್ಯ-ಚಟುವಟಿಕೆ ನಡೆಸುತ್ತಿರುತ್ತದೆ. ಈ ಹಿನ್ನೆಲೆಯಲ್ಲಿ ಈ ಸಹಕಾರ ಸಂಘವನ್ನು ಸಮಾಪನೆಗೊಳಿಸಿರುವುದನ್ನು ರದ್ದುಗೊಳಿಸಿ ಸಂಘವನ್ನು ಕೆಲವು ಷರತ್ತಿಗೆ ಒಳಪಟ್ಟು ಪುನಃಶ್ಚೇತನಗೊಳಿಸುವಂತೆ ಹಾಗೂ ಸಂಘವನ್ನು ಕಾರ್ಯನಿರತ ಸಹಕಾರ ಸಂಘಗಳ ಪಟ್ಟಿಗೆ ಸೇರಿಸುವಂತೆ ಅವರು ಕೋರಿರುತ್ತಾರೆ. ಸಂಘದ ಹಾಲಿ ಇರುವ ಆಡಳಿತ ಮಂಡಳಿಯು 2004-05 ರಿಂದ 2008-09ರ 5 ವರ್ಷಗಳ ಅವಧಿಗೆ ದಿನಾಂಕ:10-03-2004 ರಂದು ಆಯ್ಕೆಯಾಗಿದ್ದು, ಈ ಹಿನ್ನೆಲೆಯಲ್ಲಿ ಸದರೀ ಆಡಳಿತ ಮಂಡಳಿಯನ್ನೇ ಮುಂದುವರಿಸುವಂತೆ ಅವರು ಕೋರಿರುತ್ತಾರೆ.

ಸಂಘದ ಸಮಾಪನಾಧಿಕಾರಿಯವರ ಪ್ರಸ್ತಾವವನ್ನು ಪರಿಶೀಲಿಸಿದೆ. ಅವರು ಒದಗಿಸಿರುವ ದಾಖಲಾತಿಗಳನ್ನು ಪರಿಶೀಲಿಸಲಾಗಿ ಮೇಲ್ಕಂಡ ಸಹಕಾರ ಸಂಘವು ತನ್ನ ಕಾರ್ಯಚಟುವಟಿಕೆಗಳನ್ನು ನಿರ್ವಹಿಸಿಕೊಂಡು ಹೋಗುತ್ತಿರುವುದು ಕಂಡುಬಂದಿದ್ದು, ಈ ಹಿನ್ನೆಲೆಯಲ್ಲಿ ಕೆಲವು ಷರತ್ತುಗಳಿಗೆ ಒಳಪಟ್ಟು ಸಂಘವನ್ನು ಸಮಾಪನೆಗೊಳಿಸಿರುವುದನ್ನು ರದ್ದುಪಡಿಸಿ, ಸಂಘವನ್ನು ಪುನಃಶ್ಚೇತನಗೊಳಿಸಲು ತೀರ್ಮಾನಿಸಿದೆ.

ಅದರಂತೆ ಈ ಕೆಳಕಂಡ ಆದೇಶ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72(3) ಹಾಗೂ ಸರ್ಕಾರದ ಅಧಿಸೂಚನೆ ಕ್ರಮಾಂಕ:ಸಿಎಂಡಬ್ಲ್ಯೂ/69/ ಸಿಎಲ್‌ಎಂ/2001 ದಿನಾಂಕ: 21-11-2001ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಬಿ.ಸಿ.ಸತೀಶ್, ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಆದ ನಾನು ಗಾಂಧೀಜಿ ಬಳಕೆದಾರರ ಸಹಕಾರ ಸಂಘ ನಿಯಮಿತ, ನಂ.4, ಶ್ವೇತ ಕಾಂಪ್ಲೆಕ್ಸ್, ಬಸವನಗರ, ಶಾಂಪುರ ಮುಖ್ಯರಸ್ತೆ, ಬೆಂಗಳೂರು-32 ಈ ಸಹಕಾರ ಸಂಘವನ್ನು ಕಲಂ 72(2)ರನ್ವಯ ಹೊರಡಿಸಿರುವ ಈ ಕಛೇರಿಯ ಇದೇ ಕ್ರಮಾಂಕದ ದಿನಾಂಕ:13-12-2005ರ ಆದೇಶದ ರೀತ್ಯಾ ಸಮಾಪನೆಗೊಳಿಸಿರುವುದನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ ಈ ಮೂಲಕ ಆದೇಶಿಸಿರುತ್ತೇನೆ ಹಾಗೂ ಸದರೀ ಸಹಕಾರ ಸಂಘವನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಪುನಃಶ್ಚೇತನಗೊಳಿಸಿ ಈ ಮೂಲಕ ಆದೇಶಿಸಿರುತ್ತೇನೆ. ಸಂಘದ ಈ ಹಿಂದಿನ ಆಡಳಿತ ಮಂಡಳಿಯು 2004-05 ರಿಂದ 2008-09ನೇ ಸಾಲುಗಳ ಅವಧಿಗೆ ಆಯ್ಕೆಯಾಗಿರುವುದರಿಂದ, ಈ ಆಡಳಿತ ಮಂಡಳಿ ಹಾಗೂ ಪದಾಧಿಕಾರಿಗಳು ಅವರ ಅವಧಿ ಮುಗಿಯುವವರೆಗೆ ಮುಂದುವರಿಯತಕ್ಕದ್ದು ಎಂದೂ ಈ ಮೂಲಕ ಆದೇಶಿಸಲಾಗಿದೆ.

**ಷರತ್ತುಗಳು**

(1) ಸಂಘದ ದುಡಿಯುವ ಬಂಡವಾಳವನ್ನು ಷೇರು ಧನ ಸಂಗ್ರಹಿಸುವುದರ ಮೂಲಕ ಹೆಚ್ಚಿಸಿಕೊಳ್ಳುವುದು.

(2) ಸಂಘದ ಸದಸ್ಯರುಗಳ ಹಿತಕ್ಕಾಗಿ ವಿಶೇಷವಾದ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸಂಘವನ್ನು ಆರ್ಥಿಕವಾಗಿ ಸದೃಢಗೊಳಿಸುವುದು.

(3) ಸಂಘದ ಉಪ ನಿಯಮಗಳಲ್ಲಿರುವ ಉದ್ದೇಶಗಳಿಗನುಗುಣವಾಗಿ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳುವುದು.

(4) ಕರ್ನಾಟಕ ಸಹಕಾರ ಸಂಘಗಳ ನಿಯಮ 17 ರಂತೆ ಸಂಘದ ಸಿಬ್ಬಂದಿಯ ವೃಂದಬಲ ಮತ್ತು ವೇತನ ಶ್ರೇಣಿಗಳನ್ನು ಇಲಾಖೆಯಿಂದ ಅನುಮೋದನೆ ಪಡೆಯುವುದು.

(5) ದಿನಾಂಕ:31-03-2005ರ ಅಂತ್ಯಕ್ಕೆ ಸರ್ಕಾರಕ್ಕೆ ಬಾಕಿ ಇರುವ ರೂ.20,000/-ಗಳ ಸಾಲವನ್ನು ಕೂಡಲೇ ಸರ್ಕಾರದ ಸಂಬಂಧಿಸಿದ ಖಾತೆಗೆ ಜಮಾ ಮಾಡುವುದು.

6) ಸಂಘವು ಸಹಕಾರ ಸಂಘಗಳ ಕಾಯ್ದೆಯ ಕಲಂ 29 ಜಿ(6) ಯ ರೀತ್ಯಾ ನಿಗಧಿಪಡಿಸಿರುವ ಮಾಹಿತಿಗಳನ್ನು ತಪ್ಪದೇ ಈ ಕಛೇರಿಗೆ ಸಲ್ಲಿಸತಕ್ಕದ್ದು.

(7) ಸಂಘವು ಸಹಕಾರ ಸಂಘಗಳ ಕಾಯ್ದೆ ಹಾಗೂ ನಿಯಮಾವಳಿಗಳ ಅವಕಾಶಗಳ ರೀತ್ಯಾ ನಿಗಧಿತ ಅವಧಿಯ ಒಳಗೆ ಸಂಘದ ಸರ್ವಸದಸ್ಯರ ಸಭೆ ಹಾಗೂ ಆಡಳಿತ ಮಂಡಳಿ ಸಭೆ ಮತ್ತು ಪದಾಧಿಕಾರಿಗಳ ಚುನಾವಣೆಯನ್ನು ನಡೆಸತಕ್ಕದ್ದು.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 08-03-2006ರಂದು ನೀಡಿರುತ್ತೇನೆ.

ಬಿ.ಸಿ. ಸತೀಶ್

ಪಿ.ಆರ್. 643 ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ.

ಸಹಕಾರ ಇಲಾಖೆ

ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ,
ನಂ.146, 3ನೇ ಮುಖ್ಯರಸ್ತೆ, 8ನೇ ಅಡ್ಡರಸ್ತೆ, ಮಾರ್ಗೋಸಾ ರಸ್ತೆ, ಮಲ್ಲೇಶ್ವರಂ, ಬೆಂಗಳೂರು-560 003
ಇವರ ನಡವಳಿಗಳು.

ಕ್ರಮಾಂಕ:ಡಿಆರ್‌ಬಿ-1:ಸಮಾಪನೆ:40:2005-06, ದಿನಾಂಕ: 21ನೇ ಜನವರಿ 2006

**ವಿಷಯ:** 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 75 ರನ್ವಯ ಸಮಾಪನೆಯಲ್ಲಿರುವ ಮಹದೇಶ್ವರ ಬಳಕೆದಾರರ ಸಹಕಾರ ಸಂಘ ನಿಯಮಿತ, ನಂ.28, 2ನೇ ಸ್ಟೇಜ್, ಕಾವಲ್ ಭೈರಸಂದ್ರ, ಅರೇಬಿಕ್ ಲೇ ಔಟ್ ರಸ್ತೆ, ಬೆಂಗಳೂರು-32, ಈ ಸಂಘದ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1) ಸಂಘವನ್ನು ಸಹಕಾರ ಸಂಘಗಳ ಕಾಯ್ದೆಯ ಕಲಂ 72(2)ರ ರೀತ್ಯಾ ಸಮಾಪನೆಗೊಳಿಸಿರುವ ಈ ಕಛೇರಿಯ ಇದೇ ಕ್ರಮಾಂಕದ ದಿನಾಂಕ:13-12-2005 ರ ಆದೇಶ.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, (ಪ್ರಭಾರ) ಬೆಂಗಳೂರು 1ನೇ ವಲಯ, ಇವರ ಪತ್ರ ಕ್ರಮಾಂಕ: ಸನಿಬೆ-44/ನೋ/ರ/30/2005-06 ದಿನಾಂಕ:21-1-2006.

**ಪ್ರಸ್ತಾವನೆ**

ಈ ಕಛೇರಿಯ ಉಲ್ಲೇಖ (1) ರಲ್ಲಿ ಕಾಣಿಸಿರುವ ದಿನಾಂಕ: 13-12-2005ರ ಆದೇಶದಲ್ಲಿ ಅನೇಕ ವರ್ಷಗಳಿಂದ ಕಾರ್ಯನಿರ್ವಹಿಸದೇ ಸ್ಥಗಿತಗೊಂಡಿರುವ ಮಹದೇಶ್ವರ ಬಳಕೆದಾರರ ಸಹಕಾರ ಸಂಘ ನಿಯಮಿತ, ಬೆಂಗಳೂರು-32, ಈ ಸಂಘವನ್ನು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72(2) ರನ್ವಯ ಸಮಾಪನೆಗೊಳಿಸಿದ್ದು, ಸಹಕಾರ ಸಂಘಗಳ ಕಾಯ್ದೆಯ ಕಲಂ 73ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು, ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು.

ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು, ಇವರು, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೆಂಗಳೂರು 1ನೇ ವಲಯ, ಬೆಂಗಳೂರು, ಇವರ ಉಲ್ಲೇಖ (2) ರಲ್ಲಿ ಕಾಣಿಸಿರುವ ದಿನಾಂಕ: 21-1-2006ರ ಪತ್ರದ ಮೂಲಕ ಸಲ್ಲಿಸಿರುವ ಪ್ರಸ್ತಾವದಲ್ಲಿ ಈ ರೀತಿ ತಿಳಿಸಿರುತ್ತಾರೆ. ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಇವರ ದಿನಾಂಕ:13-12-2005ರ ಆದೇಶದ ರೀತ್ಯಾ ಮೇಲ್ಕಂಡ ಸಹಕಾರ ಸಂಘದ ಪ್ರಭಾರವನ್ನು ವಹಿಸಿಕೊಳ್ಳಲು ಸಂಘದ ವಿಳಾಸಕ್ಕೆ ಭೇಟಿ ನೀಡಿ ಪರಿಶೀಲಿಸಿದಂತೆ, ಅಂತಹ ಸಹಕಾರ ಸಂಘವು ಸದರೀ ವಿಳಾಸದಲ್ಲಿ ಕೆಲಸ ನಿರ್ವಹಿಸುತ್ತಿಲ್ಲವೆಂಬುದು ಮನವರಿಕೆಯಾಗಿರುತ್ತದೆ. ಈ ಸಂಬಂಧದಲ್ಲಿ ಸದರೀ ಸಂಘದ ಅಸ್ತಿತ್ವದ ಬಗ್ಗೆ ಬೆಂಗಳೂರು ಜಿಲ್ಲಾ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕಿನಲ್ಲಿ ಖಾತೆ ತೆರೆದು ವ್ಯವಹರಿಸಲಾಗುತ್ತಿದೆಯೇ ಎಂಬ ಬಗ್ಗೆ ದಿನಾಂಕ: 29-12-2005 ರಂದು ಬ್ಯಾಂಕಿಗೆ ಪತ್ರ ಬರೆದು ಕೋರಲಾಗಿತ್ತು. ಆದರೆ ಬ್ಯಾಂಕಿನಿಂದ ಈ ಸಂಬಂಧ ಬಂದಿರುವ ದಿನಾಂಕ:17-1-2006ರ ಪತ್ರದ ರೀತ್ಯಾ ಈ ಸಹಕಾರ ಸಂಘವು ಸದರೀ ಬ್ಯಾಂಕಿನಲ್ಲಿ ಖಾತೆ ಹೊಂದಿಲ್ಲವೆಂದು ತಿಳಿಸಿರುತ್ತಾರೆ. ಅದೇ ರೀತಿಯಾಗಿ ಕರ್ನಾಟಕ ರಾಜ್ಯ ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಪಶ್ಚಿಮ ವಲಯ ಮತ್ತು ಉತ್ತರ ವಲಯಗಳ ಅಧಿಕಾರಿಗಳಿಗೆ ಕ್ರಮವಾಗಿ ದಿನಾಂಕ:29-12-2005 ಹಾಗೂ 17-1-2006 ರಂದು ಬರೆದಿರುವ ಪತ್ರದಲ್ಲಿ ಮೇಲ್ಕಂಡ ಸಹಕಾರ ಸಂಘವು ನ್ಯಾಯಬೆಲೆ ಅಂಗಡಿಗಳನ್ನು ಹೊಂದಿ ವ್ಯವಹಾರವನ್ನೇನಾದರೂ ನಡೆಸುತ್ತಿದೆಯೇ ಎಂಬುದರ ಬಗ್ಗೆ ಮಾಹಿತಿ ಕೋರಲಾಗಿ, ಸದರೀ ಇಲಾಖೆಗಳಿಂದ ಈ ಸಹಕಾರ ಸಂಘವು ನ್ಯಾಯಬೆಲೆ ಅಂಗಡಿ ಹೊಂದಿರುವ ಬಗ್ಗೆ ಮಾಹಿತಿ ನೀಡಿರುವುದಿಲ್ಲ. ಆದರೆ ಈ ಸಂಘದ ಬಗ್ಗೆ ವಿವಿಧ ಮೂಲಗಳಿಂದ ಮಾಹಿತಿ ಪಡೆಯಲಾಗಿ, ಈ ಸಹಕಾರ ಸಂಘವು ಅಸ್ತಿತ್ವದಲ್ಲಿರುವ ಬಗ್ಗೆ ಮಾಹಿತಿ ದೊರೆತಿರುವುದಿಲ್ಲ. ಈ ಸಹಕಾರ ಸಂಘವು ನ್ಯಾಯಬೆಲೆ ಅಂಗಡಿ ಹೊಂದುವ ಒಂದೇ ಉದ್ದೇಶದಿಂದ ಈ ಇಲಾಖೆಯಲ್ಲಿ ಇಂತಹ ಸಹಕಾರ ಸಂಘವನ್ನು ನೋಂದಣಿ ಮಾಡಿಸಿಕೊಂಡಿದ್ದು, ಸಂಘವು ನೋಂದಣಿಯಾದ ನಂತರ, ಮುಖ್ಯ ಪ್ರವರ್ತಕರು ಅಥವಾ ಪ್ರವರ್ತಕರುಗಳು ಸಂಘದ ಕಾರ್ಯಚಟುವಟಿಕೆಯನ್ನು ಪ್ರಾರಂಭಿಸಿರುವುದಿಲ್ಲ. ಈ ಸಹಕಾರ ಸಂಘದ ಹೆಸರಿಗೆ ನ್ಯಾಯಬೆಲೆ ಅಂಗಡಿ ಮಂಜೂರಾಗದೇ ಇರುವ ಪ್ರಯುಕ್ತ ಇದರ ಕಾರ್ಯಚಟುವಟಿಕೆಗಳನ್ನು ಪ್ರಾರಂಭಿಸದೇ ಸ್ಥಗಿತಗೊಳಿಸಲಾಗಿದೆ ಎಂದು ಅಭಿಪ್ರಾಯ ಪಡಲಾಗಿದ್ದು, ಈ ಹಿನ್ನೆಲೆಯಲ್ಲಿ ಸಹಕಾರ ಸಂಘಗಳ ಕಾಯ್ದೆ ಕಲಂ 75ರಡಿಯಲ್ಲಿ ಈ ಸಹಕಾರ ಸಂಘದ ನೋಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಅವರು ಅಭಿಪ್ರಾಯ ಪಟ್ಟಿರುತ್ತಾರೆ.

ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು ಹಾಗೂ ಸಂಘದ ಸಮಾಪನಾಧಿಕಾರಿಯವರ ಪ್ರಸ್ತಾವವನ್ನು ಪರಿಶೀಲಿಸಲಾಗಿದೆ. ಮೇಲ್ಕಂಡ ಸಂಘವು ತನ್ನ ಕಾರ್ಯಚಟುವಟಿಕೆಗಳನ್ನು ನಿರ್ವಹಿಸದೇ ಸ್ಥಗಿತಗೊಂಡಿರುವುದು ಕಂಡು ಬಂದಿದ್ದು, ಈ ಸಂಘವನ್ನು ಮುಂದುವರಿಸುವುದರಿಂದ ಸಂಘದ ಸದಸ್ಯರಿಗಾಗಲೀ ಅಥವಾ ಸಾರ್ವಜನಿಕರಿಗಾಗಲೀ ಯಾವುದೇ ಉಪಯೋಗವಾಗಲಾರದು ಎಂಬುದು ಮನವರಿಕೆಯಾಗಿದೆ. ಆದ್ದರಿಂದ ಈ ಸಹಕಾರ ಸಂಘದ ನೋಂದಣಿಯನ್ನು ಸಹಕಾರ ಸಂಘಗಳ ಕಾಯ್ದೆ ಕಲಂ 75ರ ರೀತ್ಯಾ ರದ್ದುಪಡಿಸುವುದು ಸೂಕ್ತವೆಂದು ಅಭಿಪ್ರಾಯ ಪಡಲಾಗಿದೆ.

ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 75 ಹಾಗೂ ಸರ್ಕಾರದ ಅಧಿಸೂಚನೆ ಕ್ರಮಾಂಕ: ಸಿಎಂಡಬ್ಲ್ಯೂ/69/ಸಿಎಲ್‌ಎಂ/2001 ದಿನಾಂಕ:21-11-2001ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಬಿ.ಸಿ.ಸತೀಶ್, ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಆದ ನಾನು ಸಮಾಪನೆಯಲ್ಲಿರುವ ಮಹದೇಶ್ವರ ಬಳಕೆದಾರರ ಸಹಕಾರ ಸಂಘ ನಿಯಮಿತ, ನಂ.28, 2ನೇ ಸ್ಟೇಜ್, ಕಾವಲ್ ಭೈರಸಂದ್ರ, ಅರೇಬಿಕ್ ಲೇ ಔಟ್ ರಸ್ತೆ, ಬೆಂಗಳೂರು-32, ಈ ಸಹಕಾರ ಸಂಘದ ನೋಂದಣಿಯನ್ನು (ನೋಂದಣಿ ಸಂಖ್ಯೆ: ಎಆರ್‌ಬಿ-44: ಆರ್‌ಜಿಎನ್: 19404/92-93, ದಿ:05-02-1993) ಈ ಕೂಡಲೇ ಜಾರಿಗೆ ಬರುವಂತೆ ರದ್ದು ಪಡಿಸಿ, ಈ ಮೂಲಕ ಆದೇಶಿಸಿರುತ್ತೇನೆ ಹಾಗೂ ಈ ದಿನಾಂಕದಿಂದ ಸದರೀ ಸಂಘವು ಕಾರ್ಪೋರೇಟ್ ಬಾಡಿಯಾಗಿರುವ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 21-1-2006 ರಂದು ನೀಡಿರುತ್ತೇನೆ.

**ಬಿ.ಸಿ. ಸತೀಶ್**
ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ.

ಪಿ.ಆರ್. 642

## ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ
## ಬಸವ ಭವನ, ಹೈ ಗ್ರೌಂಡ್ಸ್, ಬೆಂಗಳೂರು - 560 001
### ಪ್ರಕಟಣೆ

**ಸಂಖ್ಯೆ: ಕರಾಆ:ಆಡಳಿತ:06:2006, ದಿನಾಂಕ: 19ನೇ ಏಪ್ರಿಲ್ 2006**

**ವಿಷಯ:** ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 10(1ಎ) ರಡಿಯಲ್ಲಿ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಅಧ್ಯಕ್ಷರ ಆಯ್ಕೆ ಬಗ್ಗೆ.

ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಅಡಿಯಲ್ಲಿ ರಚಿತವಾಗಿರುವ ಜಿಲ್ಲಾ ವೇದಿಕೆಗಳ ಅಧ್ಯಕ್ಷರ ಸ್ಥಾನಕ್ಕೆ ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 10(1)(a) ರನ್ವಯ ಜಿಲ್ಲಾ ನ್ಯಾಯಾಧೀಶರಾಗಿರುವವರನ್ನು ಅಥವಾ ಜಿಲ್ಲಾ ನ್ಯಾಯಾಧೀಶರಾಗಲು ಅರ್ಹರಿರುವವರನ್ನು ಅಥವಾ ಜಿಲ್ಲಾ ನ್ಯಾಯಾಧೀಶರಾಗಿರುವಂತಹ ಅಭ್ಯರ್ಥಿಗಳನ್ನು ಆಯ್ಕೆ ಮಾಡಿಕೊಳ್ಳಲು ಗ್ರಾಹಕ ಸಂರಕ್ಷಣಾ ಕಾಯ್ದೆ 1986ರಲ್ಲಿ ಅವಕಾಶವನ್ನು ಕಲ್ಪಿಸಲಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಮೈಸೂರು, ಬಳ್ಳಾರಿ ಮತ್ತು ಕೋಲಾರ ಜಿಲ್ಲಾ ವೇದಿಕೆಗಳಲ್ಲಿನ ಅಧ್ಯಕ್ಷರ ಸ್ಥಾನಕ್ಕೆ ಈ ಮುಂದಿನ ಅರ್ಹತೆ ಇರುವ ಅಭ್ಯರ್ಥಿಗಳು ನಿಗದಿತ ಅರ್ಜಿ ನಮೂನೆಯಲ್ಲಿ ದಿನಾಂಕ: 25.5.2006ರ ಸಂಜೆ 5-00 ಗಂಟೆಯೊಳಗಾಗಿ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು-560 001, ಇಲ್ಲಿಗೆ ಅರ್ಜಿಯನ್ನು ಸಲ್ಲಿಸಬಹುದಾಗಿರುತ್ತದೆ. ಅರ್ಜಿ ನಮೂನೆಯ ಪ್ರತಿಗಳನ್ನು ಎಲ್ಲಾ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗಳಲ್ಲಿ ಸಂಬಂಧಪಟ್ಟ ಅರ್ಜಿದಾರರು ನೇರವಾಗಿ ಅರ್ಜಿಯ ಜೆರಾಕ್ಸ್ ಪ್ರತಿಗಳನ್ನು ಪಡೆದುಕೊಂಡು (ಜೆರಾಕ್ಸ್ ಶುಲ್ಕವನ್ನು ಪಾವತಿ ಮಾಡಿ) ಅರ್ಜಿಯನ್ನು ಸಲ್ಲಿಸಬಹುದಾಗಿರುತ್ತದೆ. ಅರ್ಜಿಯನ್ನು ಯಾವುದೇ ಕಾರಣಕ್ಕೆ ಅಂಚೆ ಮೂಲಕ ಕಳುಹಿಸುವ ಕ್ರಮವನ್ನು ವಹಿಸುವುದಿಲ್ಲ.

**ಅರ್ಹತೆಗಳು:-**

1. ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 10(1)(ಎ)ರನ್ವಯ ಜಿಲ್ಲಾ ನ್ಯಾಯಾಧೀಶರಾಗಿರುವವರು, ಜಿಲ್ಲಾ ನ್ಯಾಯಾಧೀಶರಾಗಿದ್ದವರು ಅಥವಾ ಜಿಲ್ಲಾ ನ್ಯಾಯಾಧೀಶರಾಗಿ ನೇಮಕಾತಿ ಹೊಂದಲು ಅರ್ಹರಿರುವವರು ಜಿಲ್ಲಾ ವೇದಿಕೆಯ ಅಧ್ಯಕ್ಷರ ಸ್ಥಾನಕ್ಕೆ ಅರ್ಜಿಯನ್ನು ಸಲ್ಲಿಸಬಹುದಾಗಿರುತ್ತದೆ.
2. ಜಿಲ್ಲಾ ನ್ಯಾಯಾಧೀಶರಾಗಿ ನೇಮಕ ಹೊಂದಲು ಅರ್ಹರೆಂದರೆ, ಅಂಗೀಕೃತ ವಿಶ್ವವಿದ್ಯಾಲಯದ ಕಾನೂನು ಪದವೀಧರರಾಗಿರುವುದರ ಜೊತೆಗೆ, ನ್ಯಾಯವಾದಿಗಳಾಗಿ ಕನಿಷ್ಠ ಏಳು ವರ್ಷಗಳಿಗೂ ಹೆಚ್ಚು ಅವಧಿಯಲ್ಲಿ ಕಾರ್ಯನಿರ್ವಹಿಸಿರಬೇಕು ಹಾಗೂ ಗ್ರಾಹಕ ಸಂರಕ್ಷಣಾ ಕಾಯ್ದೆ ಬಗ್ಗೆ ಸಂಪೂರ್ಣವಾಗಿ ತಿಳಿದವರಾಗಿರಬೇಕು.
3. ಅರ್ಜಿಯನ್ನು ಸಲ್ಲಿಸುವ ದಿನಾಂಕದಂದಿಗೆ 35 ವರ್ಷ ವಯಸ್ಸನ್ನು ಮೀರಿದವರಾಗಿರಬೇಕು ಹಾಗೂ 59 ವರ್ಷ ವಯಸ್ಸಿನೊಳಗೆ ಇರುವವರು ಮಾತ್ರ ಅರ್ಜಿಯನ್ನು ಸಲ್ಲಿಸುವುದು.
4. ಅರ್ಜಿಯನ್ನು ಸಲ್ಲಿಸುವ ದಿನಾಂಕದಂದಿಗೆ ಕಾನೂನು ವಿಷಯದಲ್ಲಿ ಸಂಪೂರ್ಣ ಪರಿಣಿತಿಯನ್ನು ಹೊಂದಿರುವ ಜೊತೆಗೆ ಉತ್ತಮ ಗುಣ ಹಾಗೂ ನಡತೆ ಹೊಂದಿದವರಾಗಿರಬೇಕು.
5. ಜಿಲ್ಲಾ ವೇದಿಕೆಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಲು, ಗ್ರಾಹಕರ ವ್ಯಾಜ್ಯಗಳನ್ನು ಇತ್ಯರ್ಥ ಮಾಡಲು ತೀರ್ಪುಗಳನ್ನು ಬರೆಯಲು ಸಾಮರ್ಥ್ಯವನ್ನು ಹೊಂದಿರಬೇಕಾಗಿರುತ್ತದೆ.
6. ಅರ್ಜಿದಾರರು ತಮ್ಮ ಜನ್ಮ ದಿನಾಂಕ, ವಿದ್ಯಾರ್ಹತೆ, ಅನುಭವ, ಗುಣ ಮತ್ತು ನಡತೆ ಇವುಗಳಿಗೆ ಸಂಬಂಧಿಸಿದಂತಹ ದಾಖಲೆಗಳ ದೃಢೀಕೃತ ಪ್ರತಿಗಳನ್ನು ಅರ್ಜಿಯೊಂದಿಗೆ ಸಲ್ಲಿಸುವುದು.
7. ಅರ್ಜಿದಾರರು ಈಗಾಗಲೇ ಜಿಲ್ಲಾ ವೇದಿಕೆಯಲ್ಲಿ ಸದಸ್ಯರ ಸ್ಥಾನದಲ್ಲಿ ಕಾರ್ಯನಿರ್ವಹಿಸುತ್ತಿದ್ದರೆ ಅಂಥವರು ತಮ್ಮ ಅರ್ಜಿಗಳನ್ನು ಜಿಲ್ಲಾ ವೇದಿಕೆಯ ಅಧ್ಯಕ್ಷರ ಮೂಲಕ ರಾಜ್ಯ ಆಯೋಗಕ್ಕೆ ಸಲ್ಲಿಸಬೇಕಾಗುತ್ತದೆ.

ಜಿಲ್ಲಾ ವೇದಿಕೆಯ ಅಧ್ಯಕ್ಷರಾಗಿ ನೇಮಕಾತಿ ಹೊಂದುವವರು ಜಿಲ್ಲಾ ನ್ಯಾಯಾಧೀಶರ ವೇತನ ಮತ್ತು ಇತರ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ. ನೇಮಕಾತಿಯು 5 ವರ್ಷಗಳ ಕಾಲಿಕ ಸೇವಾವಧಿಯಾಗಿರುತ್ತದೆ. ಜಿಲ್ಲಾ ವೇದಿಕೆಯ ಸದಸ್ಯರು ಅಧ್ಯಕ್ಷರ ಸ್ಥಾನಕ್ಕೆ ಆಯ್ಕೆ ಬಯಸಿ ಅರ್ಜಿಯನ್ನು ಜಿಲ್ಲಾ ವೇದಿಕೆ ಮೂಲಕ ಸಲ್ಲಿಸಿದಾಗ ಸಂಬಂಧಪಟ್ಟ ಜಿಲ್ಲಾ ವೇದಿಕೆಯ ಅಧ್ಯಕ್ಷರು ಸದರಿ ಸದಸ್ಯರು ತಮ್ಮ ಸದಸ್ಯತ್ವದ ಕಾಲಿಕ ಸೇವಾವಧಿಯಲ್ಲಿ ಜಿಲ್ಲಾ ವೇದಿಕೆಯ ಪ್ರಕರಣಗಳ ಇತ್ಯರ್ಥಕ್ಕೆ ಯಾವ ರೀತಿ ಸಹಕರಿಸಿರುತ್ತಾರೆ ಮತ್ತು ಪ್ರಕರಣಗಳ ತೀರ್ಪುಗಳನ್ನು ಬರೆಯುವ ಸಾಮರ್ಥ್ಯವನ್ನು ಹೊಂದಿದ್ದಾರೆಯೇ ಹಾಗೂ ಎಷ್ಟು ಪ್ರಕರಣಗಳ ತೀರ್ಪುಗಳನ್ನು ಬರೆದಿರುತ್ತಾರೆ ಎಂಬ ಮಾಹಿತಿಯನ್ನು ಒಳಗೊಂಡ ದೃಢೀಕರಣ ಪತ್ರದೊಂದಿಗೆ ಅರ್ಜಿಯನ್ನು ರಾಜ್ಯ ಆಯೋಗಕ್ಕೆ ಕಳುಹಿಸಿಕೊಡಬೇಕಾಗಿರುತ್ತದೆ.

ಈ ಆಯ್ಕೆಯಲ್ಲಿ ಯಾವುದೇ ರೀತಿಯ ಶಿಫಾರಸ್ಸಿಗೆ ಅವಕಾಶವಿರುವುದಿಲ್ಲ.

**ನ್ಯಾಯಮೂರ್ತಿ ಚಂದ್ರಶೇಖರಯ್ಯ**

ಪಿ.ಆರ್. 854

ಅಧ್ಯಕ್ಷರು,

ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬೆಂಗಳೂರು.

## ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಾರ್ಯಾಲಯ

**ವಿಷಯ:** ಸಮಾಪನೆಗೊಂಡಿರುವ ಕೊಡಗವಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ, ಚಿತ್ರದುರ್ಗ ಇದರ ನೊಂದಣಿ ರದ್ದತಿಯ ಬಗ್ಗೆ.

**ಉಲ್ಲೇಖ:**
1. ಸಹಕಾರ ಸಂಘಗಳ ನಿರೀಕ್ಷಕರು, ಚಿತ್ರದುರ್ಗ ತಾ.ಇವರ ಪ್ರಸ್ತಾವನೆ ಸಂಖ್ಯೆ:ಸಿಡಿಓ:ಚಿತ್ರದುರ್ಗ:ರದ್ದತಿ:06-07, ದಿನಾಂಕ:25.3.2006.
2. ಈ ಕಛೇರಿಯ ಸಮಾಪನೆ ಆದೇಶ ಕ್ರಮಾಂಕ ಡಿಆರ್‌ಡಿ: ಎಲ್‌ಕ್ಯೂಡಿ:ಸಿಆರ್:24:05-06 ದಿನಾಂಕ: 15.11.2005.

**ಪೀಠಿಕೆ:**

ಪ್ರಸ್ತುತ ವಿಷಯದಲ್ಲಿ ನಮೂದಿಸಿದ ಸಹಕಾರ ಸಂಘದ ನೊಂದಣಿ ರದ್ದುಪಡಿಸುವಂತೆ ಸಹಕಾರ ಸಂಘಗಳ ನಿರೀಕ್ಷಕರು ಚಿತ್ರದುರ್ಗ ತಾ. ಇವರು ಮೇಲ್ಕಂಡ ಉಲ್ಲೇಖದಲ್ಲಿ (01) ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಸಮೀಕ್ಷಣೆ ಮಾಡಲಾಗಿ ಸಂಘಕ್ಕೆ ಬರತಕ್ಕ ಮತ್ತು ಸಂಘವು

ಕೊಡತಕ್ಕ ಮೊಬಲಗು ನಿವ್ವಳ ನಷ್ಟ ರೂ. 0.03 ಲಕ್ಷಗಳು ವಜಾ ಜಾತ ರೂ. 0.01 ಮಾತ್ರ ಇದ್ದು ಹೋಕು ಬಾಕಿಯಾಗಿರುವುದರಿಂದ ಇದರ ನೋಂದಣಿಯನ್ನು ರದ್ದು ಮಾಡಲು ಶಿಫಾರಸ್ಸು ಮಾಡಿರುತ್ತಾರೆ. ಅವರ ಶಿಫಾರಸ್ಸನ್ನು ಪರಾಂಭರಿಸಿ ಈ ಕೆಳಕಂಡ ಆದೇಶವನ್ನು ನೀಡಲಾಗಿದೆ.

**ಆದೇಶ**

**ನಂ: ಡಿಆರ್‌ಡಿ:ಎಲ್‌ಕ್ಯೂಡಿ:ಸಿಆರ್-24-05-06, ದಿನಾಂಕ: 31ನೇ ಮಾರ್ಚ್ 2006**

ಮೇಲ್ಕಂಡ ಪೀಠಿಕೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಗಣಿಸಿ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 75ರ ಅನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂ:ಸಿಎಂಡಬ್ಲ್ಯೂ:243:ಎಲ್‌ಎಂ:94:4.5.94ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಚಿತ್ರದುರ್ಗ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರಾದ ಶ್ರೀಮತಿ ಟಿ.ಓ. ಸುನಂದಮ್ಮ, ಆದ ನಾನು ಪರಿಸಮಾಪನೆಗೊಳಿಸಲ್ಪಟ್ಟಿದ್ದ ಕೊಡಗವಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ. ಚಿತ್ರದುರ್ಗ ತಾ. ಈ ಸಹಕಾರ ಸಂಘದ ಇದರ ನೊಂದಣಿ ಸಂಖ್ಯೆ: ಎಆರ್:30/ಆರ್‌ಎಸ್‌ಆರ್/ನೊಂದಣಿ/16930/88-89 ದಿನಾಂಕ: 14.12.1988 ಯನ್ನು ರದ್ದುಗೊಳಿಸಿ ಈ ಮೂಲಕ ಆದೇಶ ಹೊರಡಿಸಿರುತ್ತೇನೆ. ಈ ರದ್ದತಿಯ ಅನ್ವಯ ಈ ದಿನಾಂಕದಿಂದ ಸದರಿ ಸಂಘವು ವಿಸರ್ಜಿಸಲ್ಪಟ್ಟಿತೆಂದೂ ಮತ್ತು ಸದರಿ ಸಂಘದ ಅಸ್ತಿತ್ವ ಇಲ್ಲವೆಂದು ಪರಿಗಣಿಸತಕ್ಕದ್ದು.

ನನ್ನ ಸ್ವ ಸಹಿ ಮತ್ತು ಹುದ್ದೆಯ ಮುದ್ರೆಯೊಂದಿಗೆ ಈ ದಿನ ದಿನಾಂಕ:31.3.2006 ರಂದು ಆದೇಶ ನೀಡಲಾಗಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿ.ಆರ್. 840

**ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಾರ್ಯಾಲಯ**

**ವಿಷಯ:** ಸಮಾಪನೆಗೊಂಡಿರುವ ಚಿಕ್ಕಗೊಂಡವನಹಳ್ಳಿ ಎಣ್ಣೆ ಬೀಜದ ಬೆಳೆಗಾರರ ಸಹಕಾರ ಸಂಘ ಚಿಕ್ಕಗೊಂಡವನಹಳ್ಳಿ ನಿ. ಚಿತ್ರದುರ್ಗ ತಾ. ಇದರ ನೊಂದಣಿ ರದ್ದತಿಯ ಬಗ್ಗೆ.

**ಉಲ್ಲೇಖ:**
1. ಸಹಕಾರ ಸಂಘಗಳ ನಿರೀಕ್ಷಕರು, ಚಿತ್ರದುರ್ಗ ತಾ.ಇವರ ಪ್ರಸ್ತಾವನೆ ಸಂಖ್ಯೆ:ಸಿಡಿಓ:ಚಿತ್ರದುರ್ಗ:ರದ್ಧತಿ:06-07, ದಿನಾಂಕ:25.3.2006.
2. ಈ ಕಛೇರಿಯ ಸಮಾಪನೆ ಆದೇಶ ಕ್ರಮಾಂಕ ಡಿಆರ್‌ಡಿ: ಎಲ್‌ಕ್ಯೂಡಿ:ಸಿಆರ್:31:05-06 ದಿನಾಂಕ: 30.12.2005.

**ಪೀಠಿಕೆ:**

ಪ್ರಸ್ತುತ ವಿಷಯದಲ್ಲಿ ನಮೂದಿಸಿದ ಸಹಕಾರ ಸಂಘದ ನೊಂದಣಿ ರದ್ದುಪಡಿಸುವಂತೆ ಸಹಕಾರ ಸಂಘಗಳ ನಿರೀಕ್ಷಕರು ಚಿತ್ರದುರ್ಗ ತಾ. ಇವರು ಮೇಲ್ಕಂಡ ಉಲ್ಲೇಖದಲ್ಲಿ (01) ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಸಮೀಕ್ಷಣೆ ಮಾಡಲಾಗಿ ಸಂಘಕ್ಕೆ ಬರತಕ್ಕ ಮತ್ತು ಸಂಘವು ಕೊಡತಕ್ಕ ಮೊಬಲಗು ನಿವ್ವಳ ನಷ್ಟ ರೂ. 0.31 ಲಕ್ಷಗಳು ವಜಾ ಜಾತ ರೂ. 0.14 ಮಾತ್ರ ಇದ್ದು ಹೋಕು ಬಾಕಿಯಾಗಿರುವುದರಿಂದ ಇದರ ನೋಂದಣಿಯನ್ನು ರದ್ದು ಮಾಡಲು ಶಿಫಾರಸ್ಸು ಮಾಡಿರುತ್ತಾರೆ. ಅವರ ಶಿಫಾರಸ್ಸನ್ನು ಪರಾಂಭರಿಸಿ ಈ ಕೆಳಕಂಡ ಆದೇಶವನ್ನು ನೀಡಲಾಗಿದೆ.

**ಆದೇಶ**

**ನಂ: ಡಿಆರ್‌ಡಿ:ಎಲ್‌ಕ್ಯೂಡಿ:ಸಿಆರ್-31-05-06, ದಿನಾಂಕ: 31ನೇ ಮಾರ್ಚ್ 2006**

ಮೇಲ್ಕಂಡ ಪೀಠಿಕೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಗಣಿಸಿ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 75ರ ಅನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂ:ಸಿಎಂಡಬ್ಲ್ಯೂ:243:ಎಲ್‌ಎಂ:94:4.5.94ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಚಿತ್ರದುರ್ಗ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರಾದ ಶ್ರೀಮತಿ ಟಿ.ಓ. ಸುನಂದಮ್ಮ, ಆದ ನಾನು ಪರಿಸಮಾಪನೆಗೊಳಿಸಲ್ಪಟ್ಟಿದ್ದ ಚಿಕ್ಕಗೊಂಡವನಹಳ್ಳಿ ಎಣ್ಣೆ ಬೀಜದ ಬೆಳೆಗಾರರ ಸಹಕಾರ ಸಂಘ ಚಿಕ್ಕಗೊಂಡವನಹಳ್ಳಿ ನಿ. ಚಿತ್ರದುರ್ಗ ತಾ. ಈ ಸಹಕಾರ ಸಂಘದ ಇದರ ನೊಂದಣಿ ಸಂಖ್ಯೆ: ಎಆರ್‌ಎಸ್:20/ನೊಂದಣಿ/18924/88-89 ದಿನಾಂಕ: 26.8.1998 ಯನ್ನು ರದ್ದುಗೊಳಿಸಿ ಈ ಮೂಲಕ ಆದೇಶ ಹೊರಡಿಸಿರುತ್ತೇನೆ. ಈ ರದ್ದತಿಯ ಅನ್ವಯ ಈ ದಿನಾಂಕದಿಂದ ಸದರಿ ಸಂಘವು ವಿಸರ್ಜಿಸಲ್ಪಟ್ಟಿತೆಂದೂ ಮತ್ತು ಸದರಿ ಸಂಘದ ಅಸ್ತಿತ್ವ ಇಲ್ಲವೆಂದು ಪರಿಗಣಿಸತಕ್ಕದ್ದು.

ನನ್ನ ಸ್ವ ಸಹಿ ಮತ್ತು ಹುದ್ದೆಯ ಮುದ್ರೆಯೊಂದಿಗೆ ಈ ದಿನ ದಿನಾಂಕ:31.3.2006 ರಂದು ಆದೇಶ ನೀಡಲಾಗಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿ.ಆರ್. 841

**ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಾರ್ಯಾಲಯ**

**ವಿಷಯ:** ಸಮಾಪನೆಗೊಂಡಿರುವ ಕಂದಾಯ ಇಲಾಖೆ ನೌಕರರ ಸಹಕಾರ ಸಂ. ನಿ. ಚಿತ್ರದುರ್ಗ ತಾ. ಇದರ ರದ್ದತಿಯ ಬಗ್ಗೆ.

**ಉಲ್ಲೇಖ:**
1. ಸಹಕಾರ ಸಂಘಗಳ ನಿರೀಕ್ಷಕರು, ಚಿತ್ರದುರ್ಗ ತಾ.ಇವರ ಪ್ರಸ್ತಾವನೆ ಸಂಖ್ಯೆ:ಸಿಡಿಓ:ಚಿತ್ರದುರ್ಗ:ರದ್ಧತಿ:06-07, ದಿನಾಂಕ:25.3.2006.
2. ಈ ಕಛೇರಿಯ ಸಮಾಪನೆ ಆದೇಶ ಕ್ರಮಾಂಕ ಡಿಆರ್‌ಡಿ:ಎಲ್‌ಕ್ಯೂಡಿ:ಸಿಆರ್:30:05-06 ದಿನಾಂಕ: 31.12.2005.

**ಪೀಠಿಕೆ:**

ಪ್ರಸ್ತುತ ವಿಷಯದಲ್ಲಿ ನಮೂದಿಸಿದ ಸಹಕಾರ ಸಂಘದ ನೊಂದಣಿ ರದ್ದುಪಡಿಸುವಂತೆ ಸಹಕಾರ ಸಂಘಗಳ ನಿರೀಕ್ಷಕರು ಚಿತ್ರದುರ್ಗ ತಾ. ಇವರು ಮೇಲ್ಕಂಡ ಉಲ್ಲೇಖದಲ್ಲಿ (01) ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಸಮೀಕ್ಷಣೆ ಮಾಡಲಾಗಿ ಸಂಘಕ್ಕೆ ಬರತಕ್ಕ ಮತ್ತು ಸಂಘವು ಕೊಡತಕ್ಕ ಮೊಬಲಗು ನಿವ್ವಳ ನಷ್ಟ ರೂ. 0.01 ಲಕ್ಷಗಳು ವಜಾ ಜಾತ ರೂ. 0.05 ಮಾತ್ರ ಇದ್ದು ಹೋಕು ಬಾಕಿಯಾಗಿರುವುದರಿಂದ ಇದರ ನೋಂದಣಿಯನ್ನು ರದ್ದು ಮಾಡಲು ಶಿಫಾರಸ್ಸು ಮಾಡಿರುತ್ತಾರೆ. ಅವರ ಶಿಫಾರಸ್ಸನ್ನು ಪರಾಂಭರಿಸಿ ಈ ಕೆಳಕಂಡ ಆದೇಶವನ್ನು ನೀಡಲಾಗಿದೆ.

**ಆದೇಶ ನಂ: ಡಿಆರ್‌ಡಿ:ಎಲ್‌ಕ್ಯೂಡಿ:ಸಿಆರ್-34-05-06, ದಿನಾಂಕ: 31ನೇ ಮಾರ್ಚ್ 2006**

ಮೇಲ್ಕಂಡ ಪೀಠಿಕೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಗಣಿಸಿ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 75ರ ಅನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂ:ಸಿಎಂಡಬ್ಲ್ಯೂ:243:ಎಲ್‌ಎಂ:94:4.5.94ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಚಿತ್ರದುರ್ಗ ಜಿಲ್ಲಾ

ಸಹಕಾರ ಸಂಘಗಳ ಉಪ ನಿಬಂಧಕರಾದ ಶ್ರೀಮತಿ ಟಿ.ಓ. ಸುನಂದಮ್ಮ ಆದ ನಾನು ಪರಿಸಮಾಪನೆಗೊಳಿಸಲ್ಪಟ್ಟಿದ್ದ ಕಂದಾಯ ಇಲಾಖೆ ನೌಕರರ ಸಹಕಾರ ಸಂಘ ನಿ. ಚಿತ್ರದುರ್ಗ ತಾ. ಈ ಸಹಕಾರ ಸಂಘದ ಇದರ ನೊಂದಣಿ ಸಂಖ್ಯೆ: ಎಆರ್‌ಸಿ:644/65-66 ದಿನಾಂಕ: 18.12.1965 ಯನ್ನು ರದ್ದುಗೊಳಿಸಿ ಈ ಮೂಲಕ ಆದೇಶ ಹೊರಡಿಸಿರುತ್ತೇನೆ. ಈ ರದ್ದತಿಯ ಅನ್ವಯ ಈ ದಿನಾಂಕದಿಂದ ಸದರಿ ಸಂಘವು ವಿಸರ್ಜಿಸಲ್ಪಟ್ಟಿತೆಂದೂ ಮತ್ತು ಸದರಿ ಸಂಘದ ಅಸ್ತಿತ್ವ ಇಲ್ಲವೆಂದು ಪರಿಗಣಿಸತಕ್ಕದ್ದು. ಹೆಚ್ಚುವರಿ ಉಳಿದ ರೂ. ಗಳನ್ನು Nil ಇವರಿಗೆ ಪಾವತಿಸುವುದು. / ಠೇವಣಿ ಇಡತಕ್ಕದೆಂದು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಹುದ್ದೆಯ ಮುದ್ರೆಯೊಂದಿಗೆ ಈ ದಿನ ದಿನಾಂಕ:31.3.2006 ರಂದು ಆದೇಶ ನೀಡಲಾಗಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿ.ಆರ್. 842

## ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಾರ್ಯಾಲಯ

**ವಿಷಯ:** ಸಮಾಪನೆಗೊಂಡಿರುವ ಚಿಕ್ಕಗೊಂಡನಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ, ಚಿತ್ರದುರ್ಗ ತಾ. ಇದರ ನೊಂದಣಿ ರದ್ದತಿಯ ಬಗ್ಗೆ.

**ಉಲ್ಲೇಖ:**
1. ಸಹಕಾರ ಸಂಘಗಳ ನಿರೀಕ್ಷಕರು, ಚಿತ್ರದುರ್ಗ ತಾ.ಇವರ ಪ್ರಸ್ತಾವನೆ ಸಂಖ್ಯೆ:ಸಿಡಿಓ:ಚಿತ್ರದುರ್ಗ:ರದ್ದತಿ:06-07, ದಿನಾಂಕ:25.3.2006.
2. ಈ ಕಛೇರಿಯ ಸಮಾಪನೆ ಆದೇಶ ಕ್ರಮಾಂಕ ಡಿಆರ್‌ಡಿ:ಎಲ್‌ಕ್ಯೂಡಿ:ಸಿಆರ್:34:05-06 ದಿನಾಂಕ: 30.12.2005.

**ಪೀಠಿಕೆ:**

ಪ್ರಸ್ತುತ ವಿಷಯದಲ್ಲಿ ನಮೂದಿಸಿದ ಸಹಕಾರ ಸಂಘದ ನೊಂದಣಿ ರದ್ದುಪಡಿಸುವಂತೆ ಸಹಕಾರ ಸಂಘಗಳ ನಿರೀಕ್ಷಕರು ಚಿತ್ರದುರ್ಗ ತಾ. ಇವರು ಮೇಲ್ಕಂಡ ಉಲ್ಲೇಖದಲ್ಲಿ (01) ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಸಮೀಕ್ಷಣೆ ಮಾಡಲಾಗಿ ಸಂಘಕ್ಕೆ ಬರತಕ್ಕ ಮತ್ತು ಸಂಘವು ಕೊಡತಕ್ಕ ಮೊಬಲಗು ನಿವ್ವಳ ನಷ್ಟ ರೂ. 0.12 ಲಕ್ಷಗಳು ವಜಾ ಜಾತ ರೂ. 0.12 ಮಾತ್ರ ಇದ್ದು ಹೋಕು ಬಾಕಿಯಾಗಿರುವುದರಿಂದ ಇದರ ನೋಂದಣಿಯನ್ನು ರದ್ದು ಮಾಡಲು ಶಿಫಾರಸ್ಸು ಮಾಡಿರುತ್ತಾರೆ. ಅವರ ಶಿಫಾರಸ್ಸನ್ನು ಪರಾಂಭರಿಸಿ ಈ ಕೆಳಕಂಡ ಆದೇಶವನ್ನು ನೀಡಲಾಗಿದೆ.

**ಆದೇಶ**

**ನಂ: ಡಿಆರ್‌ಡಿ:ಎಲ್‌ಕ್ಯೂಡಿ:ಸಿಆರ್-34-05-06, ದಿನಾಂಕ: 31ನೇ ಮಾರ್ಚ್ 2006**

ಮೇಲ್ಕಂಡ ಪೀಠಿಕೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಗಣಿಸಿ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 75ರ ಅನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂ:ಸಿಎಂಡಬ್ಲ್ಯೂ:243:ಎಲ್‌ಎಂ:94:4.5.94ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಚಿತ್ರದುರ್ಗ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರಾದ ಶ್ರೀಮತಿ ಟಿ.ಓ. ಸುನಂದಮ್ಮ ಆದ ನಾನು ಪರಿಸಮಾಪನೆಗೊಳಿಸಲ್ಪಟ್ಟಿದ್ದ ಚಿಕ್ಕಗೊಂಡನಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ. ಚಿತ್ರದುರ್ಗ ತಾ. ಈ ಸಹಕಾರ ಸಂಘದ ಇದರ ನೊಂದಣಿ ಸಂಖ್ಯೆ: ಆರ್30/ಬಿಆರ್‌ಎಸ್‌ಆರ್/ನೊಂದಣಿ/16740/88-89 ದಿನಾಂಕ: 14.12.1988 ಯನ್ನು ರದ್ದುಗೊಳಿಸಿ ಈ ಮೂಲಕ ಆದೇಶ ಹೊರಡಿಸಿರುತ್ತೇನೆ. ಈ ರದ್ದತಿಯ ಅನ್ವಯ ಈ ದಿನಾಂಕದಿಂದ ಸದರಿ ಸಂಘವು ವಿಸರ್ಜಿಸಲ್ಪಟ್ಟಿತೆಂದೂ ಮತ್ತು ಸದರಿ ಸಂಘದ ಅಸ್ತಿತ್ವ ಇಲ್ಲವೆಂದು ಪರಿಗಣಿಸತಕ್ಕದ್ದು, ಹೆಚ್ಚುವರಿ ಉಳಿದ ರೂ. ಗಳನ್ನು ಇವರಿಗೆ ಪಾವತಿಸುವುದು / ಠೇವಣಿ ಇಡತಕ್ಕದೆಂದು ಆದೇಶಿಸಿದೆ.

ನನ್ನ ಸ್ವ ಸಹಿ ಮತ್ತು ಹುದ್ದೆಯ ಮುದ್ರೆಯೊಂದಿಗೆ ಈ ದಿನ ದಿನಾಂಕ:31.3.2006 ರಂದು ಆದೇಶ ನೀಡಲಾಗಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿ.ಆರ್. 843

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ

**ಪ್ರ.ಸಂ. ಕಾಅದಾ: ಕಾನಪ:ಸಿಆರ್-75/06, ದಿನಾಂಕ: 10ನೇ ಏಪ್ರಿಲ್ 2006**

| ಅರ್ಜಿದಾರರು: | ವಿರುದ್ಧ | ಪ್ರತಿವಾದಿಗಳು: |
|---|---|---|
| 1. ಶ್ರೀಮತಿ ಕೆಂಚಮ್ಮ ಕೋಂ ಲೇ|| ಹನುಮಂತಪ್ಪ<br>2. ಕು|| ಅನಿತಾ ಇವರ ವಾಸ: ನೇ ಮೇನ್ ಇಂದಿರಾನಗರ, ಹರಿಹರ. | | 1. ಚನ್ನಬಸಪ್ಪ<br>ಕಲ್ಲಿನ ಕ್ವಾರಿ ಮಾಲೀಕರು, ಬೇವಿನಹಳ್ಳಿ, ಹರಪನಹಳ್ಳಿ, ತಾಲ್ಲೂಕು ದಾವಣಗೆರೆ ಜಿಲ್ಲೆ. |

**ಪ್ರಕಟಣೆ**

ಶ್ರೀಮತಿ (1) ಕೆಂಚಮ್ಮ (2) ಕುಮಾರಿ ಅನಿತಾ ಇವರುಗಳಾದ ತಾವು ಮೃತ ಹನುಮಂತಪ್ಪ ಇವರ ಹೆಂಡತಿ ಮತ್ತು ಮಗಳು ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಹನುಮಂತಪ್ಪ ರವರು ಒಂದನೇ ಪ್ರತಿವಾದಿಗಳಾದ ಚನ್ನಬಸಪ್ಪ ಇವರ ಕ್ವಾರಿ ರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು, ಕಾರ್ಮಿಕ ನಷ್ಟ ಪರಿಹಾರ
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್. 844

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ

**ಪ್ರ.ಸಂ. ಕಾಅದಾ: ಕಾನಪ:ಸಿಆರ್-80/06, ದಿನಾಂಕ: 17ನೇ ಏಪ್ರಿಲ್ 2006**

**ಅರ್ಜಿದಾರರು:**

1. ರೇವತಿ ಕೋಂ ಲೇ|| ಹನುಮಂತಪ್ಪ ಹಾಗೂ ಮತ್ತಿಬ್ಬರು ಮಕ್ಕಳು
   **ವಾಸ:** ಸುಣ್ಣದ ಗೇರಿ ಹರಪನ ಹಳ್ಳಿ ದಾವಣಗೆರೆ ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು:**

1. ಎಕ್ಸಿಕ್ಯೂಟೀವ್ ಇಂಜಿನಿಯರ್ ಜಿಲ್ಲಾ ಪಂಚಾಯತ್ ಹರಪನ ಹಳ್ಳಿ ಡಿವಿಜನ್ ಹರಪನಹಳ್ಳಿ.
2. ದಿ ಮ್ಯಾನೇಜರ್ ಕೆ.ಜಿ.ಐ.ಡಿ., ಕೆ.ಜಿ.ಐ.ಡಿ ಬಿಲ್ಡಿಂಗ್ ಕರ್ನಾಟಕ ಉಚ್ಚ ನ್ಯಾಯಾಲಯ ಹತ್ತಿರ ಬೆಂಗಳೂರು.

**ಪ್ರಕಟಣೆ**

ಶ್ರೀಮತಿ ರೇವತಿ ಡಿ.ಹೆಚ್. ಸವಿತ, ಡಿ.ಹೆಚ್. ಶ್ವೇತಾ ಇವರುಗಳಾದ ತಾವು ಮೃತ ಹನುಮಂತಪ್ಪ ಇವರ ಹೆಂಡತಿ ಮತ್ತು ಮಕ್ಕಳೆಂದು ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಹನುಮಂತಪ್ಪ ರವರು ಒಂದನೇ ಪ್ರತಿವಾದಿಗಳಾದ ಎಕ್ಸಿಕ್ಯೂಟೀವ್ ಇಂಜಿನಿಯರ್ ಜಿ.ಪ. ಇವರ ಜೀಪ್ ರಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು, ಕಾರ್ಮಿಕ ನಷ್ಟ ಪರಿಹಾರ
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್. 845

## ಕಾರ್ಮಿಕ ನಷ್ಟ ಪರಿಹಾರಕ್ಕೆ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ, ಉಡುಪಿ ಜಿಲ್ಲೆ, ಉಡುಪಿ ಇವರ ನ್ಯಾಯಾಲಯದಲ್ಲಿ

**ಸಂಖ್ಯೆ: ಡಬ್ಲ್ಯುಸಿಎ:ಸಿಆರ್-7/ಎಫ್‌ಸಿ/2006, ದಿನಾಂಕ: 21ನೇ ಏಪ್ರಿಲ್ 2006**

**ಅರ್ಜಿದಾರರು:**

ಶ್ರೀಮತಿ ಮೋಹಿನಿ W/o ಪಾಂಡುರಂಗ ಖಾರ್ವಿ,
ದೊಡ್ಡ ಹಿತ್ಲು, ಗಂಗೊಳ್ಳಿ ಗ್ರಾಮ ಅಂಚೆ, ಕುಂದಾಪುರ.

**ವಿರುದ್ಧ**

**ಪ್ರತಿವಾದಿಗಳು:**

1. ಶ್ರೀ ಪ್ರಭಾಕರ ಕಾಂಚನ ಬಿನ್ ನಾರಾಯಣ ಜಿ. ಕಾಂಚನ ಪಡುಕೆರೆ, ಕೋಟ, ಉಡುಪಿ.
2. ದಿ ಓರಿಯೆಂಟಲ್ ಇನ್ಸೂರೆನ್ಸ್ ಕಂ. ಲಿ., ಬ್ರಾಂಚ್ ಆಫೀಸ್, ಕುಂದಾಪುರ

**ಅಧಿಸೂಚನೆ**

ಅರ್ಜಿದಾರಳಾದ ಶ್ರೀಮತಿ ಮೋಹಿನಿ ಇವರು ತಮ್ಮ ಗಂಡನಾದ ಶ್ರೀ ಪಾಂಡುರಂಗ ಖಾರ್ವಿ ಇವರು ಪ್ರತಿವಾದಿಗಳಾದ ಶ್ರೀ ಪ್ರಭಾಕರ ಕಾಂಚನ ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ: 12.1.2006 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ, ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ, ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿವಸಗಳ ಒಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸುವುದೆಂದು ತಿಳಿಸಲಾಗಿದೆ.

ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಡುಪಿ ಜಿಲ್ಲೆ, ಉಡುಪಿ.

ಪಿ.ಆರ್. 846

## ಕಾರ್ಮಿಕ ನಷ್ಟ ಪರಿಹಾರಕ್ಕೆ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ, ಉಡುಪಿ ಜಿಲ್ಲೆ, ಉಡುಪಿ ಇವರ ನ್ಯಾಯಾಲಯದಲ್ಲಿ

**ಸಂಖ್ಯೆ: ಡಬ್ಲ್ಯುಸಿಎ:ಸಿಆರ್-8/ಎಫ್‌ಸಿ/2006, ದಿನಾಂಕ: 21ನೇ ಏಪ್ರಿಲ್ 2006**

**ಅರ್ಜಿದಾರರು:**

1. ಶ್ರೀ ಎ.ಆರ್. ಮನಿ, S/o ರಮನ್
2. ಶ್ರೀಮತಿ ಕೆ.ಸಿ. ಮೀನ,
   W/o ಎ.ಆರ್. ಮನಿ, ವಾಸ: C/o ಶ್ರೀಮತಿ ಸ್ಮಿತಾ ಪ್ರಿನ್ಸ್
   R/o ವಿಜಯಲಕ್ಷ್ಮೀ ನಿಲಯ, ವಿಠಲವಾಡಿ, ಕುಂದಾಪುರ.

**ವಿರುದ್ಧ**

**ಪ್ರತಿವಾದಿಗಳು:**

1. ಶ್ರೀಮತಿ ಸ್ಮಿತಾ ಪ್ರಿನ್ಸ್, ಕೆ.ವಿ.
   R/o ವಿಜಯಲಕ್ಷ್ಮೀ ನಿಲಯ,
   ಜೆ.ಎಲ್.ಬಿ.ರೋಡ್, ವಿಠಲವಾಡಿ, ಕುಂದಾಪುರ.
2. ನ್ಯಾಷನಲ್ ಇನ್ಸೂರೆನ್ಸ್ ಕಂ.ಲಿ.,
   ಬಿ.ಎಂ.ಸಿ. ಹೌಸ್, ನ್ಯೂ ದೆಹಲಿ.

**ಅಧಿಸೂಚನೆ**

ಅರ್ಜಿದಾರರಾದ ಶ್ರೀ ಎ.ಆರ್. ಮನಿ ಇವರು ತಮ್ಮ ಮಗನಾದ ಶ್ರೀ ಜಿಮ್ಮಿ ಇವರು ಪ್ರತಿವಾದಿಗಳಾದ ಶ್ರೀ ಸ್ಮಿತಾ ಪ್ರಿನ್ಸ್ ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ: 2.1.2006 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ, ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ, ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿವಸಗಳ ಒಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸುವುದೆಂದು ತಿಳಿಸಲಾಗಿದೆ.

ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಪಿ.ಆರ್. 847 ಉಡುಪಿ ಜಿಲ್ಲೆ, ಉಡುಪಿ.

**ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ**

**ಸಂಖ್ಯೆ: ಎ1.71ಎ.ಅಮೊ.64/05-06, ದಿನಾಂಕ: 18ನೇ ಏಪ್ರಿಲ್ 2006**

**ಪ್ರಕಟಣೆ**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಶ್ರೀಗಂಧದ ಕಳ್ಳಸಾಗಾಣಿಕೆಯಲ್ಲಿ ತೊಡಗಿದ್ದ ಈ ಕೆಳಕಂಡ ವಾಹನಗಳನ್ನು ವಶಪಡಿಸಿಕೊಂಡು ಶ್ರೀಗಂಧವನ್ನೂ ಹಾಗೂ ಸದರಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 71-ಎ ಯ ಪ್ರಕಾರ ಮುಂದಿನ ದಾವೆ ನಡೆಸಲು ಈ ನ್ಯಾಯಾಲಯದ ಮುಂದೆ ಹಾಜರುಪಡಿಸಿರುತ್ತಾರೆ.

ಆದುದರಿಂದ ಸದರಿ ವಾಹನಗಳ ಸಂಬಂಧದಲ್ಲಿ ಯಾವುದೇ ಹಕ್ಕು ಭಾದ್ಯತೆಗಳು ರುಜುವಾತುಪಡಿಸಲು ಇದ್ದಲ್ಲಿ ಅಂತಹ ವ್ಯಕ್ತಿಗಳು ತಮ್ಮಲ್ಲಿ ಇರುವ ವಾಹನದ ಮಾಲೀಕತ್ವದ ಮೂಲ ದಾಖಲಾತಿಗಳೊಂದಿಗೆ ಈ ಪ್ರಕಟಣೆಯು ಪ್ರಕಟವಾದ 30 (ಮೂತ್ತು) ದಿವಸಗಳೊಳಗಾಗಿ ಈ ನ್ಯಾಯಾಲಯದ ಮುಂದೆ ಹಾಜರಾಗಿ ತಮ್ಮ ಮಾಲೀಕತ್ವವನ್ನು ರುಜುವಾತುಪಡಿಸುವುದು. ನಿಗದಿಪಡಿಸಿದ ಅವಧಿಯೊಳಗಡೆ ಯಾವುದೇ ಅಹವಾಲು ಇಲ್ಲವಾದಲ್ಲಿ ಅಥವಾ ನಂತರ ಯಾವುದೇ ಅಹವಾಲು ಬಂದಲ್ಲಿ ಅವನ್ನು ಪರಿಗಣಿಸಲಾಗುವುದಿಲ್ಲ ಹಾಗೂ 1963ರ ಕರ್ನಾಟಕ ಅರಣ್ಯ ಕಾಯ್ದೆಯ 71-ಎ ನಿಂದ ಎಫ್ ವರೆಗಿನ ವಿಧಿಯಂತೆ ಮುಂದಿನ ಕ್ರಮ ಜರುಗಿಸಲಾಗುವುದು.

| ಅ.ಮೊ. ಸಂಖ್ಯೆ ಮತ್ತು ದಿನಾಂಕ | ವಾಹನ ಮಾದರಿ ಹಾಗೂ ಅದರ ಸಂಖ್ಯೆ | ಛಾಸಿಯ ಸಂಖ್ಯೆ | ಇಂಜಿನ್ ಸಂಖ್ಯೆ |
|---|---|---|---|
| ಮೊಕದ್ದಮೆ ದಾಖಲುಪಡಿಸಿದವರು: ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ | | | |
| 64/05-06 30.3.2006 | ಯಮಹ ಬೈಕ್ ಕೆಎ.14.ಎಲ್.2172 | 994145/281122 | 145281122 |

**ಕೆ.ಎನ್. ಲಕ್ಷ್ಮೀನಾರಾಯಣ**
ಪಿ.ಆರ್. 848 ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಪ್ರಾದೇಶಿಕ ಅರಣ್ಯ ವಿಭಾಗ, ಬೀದರ್ ಇವರ ನ್ಯಾಯಾಲಯ, ಬೀದರ್**

**ಅಧಿಸೂಚನೆ**

**ಸಂಖ್ಯೆ: ಸರ್ವೆ:ಉಅಸಂ:ಬೀದರ್:ಮುಟ್ಟುಗೋಲು-71ಎ:ಸಿಆರ್-02/2005-06, ದಿನಾಂಕ: 21ನೇ ಏಪ್ರಿಲ್ 2006**

ಬೀದರ್ ಪ್ರಾದೇಶಿಕ ಅರಣ್ಯ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧದ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಬೀದರ್ ಜಿಲ್ಲೆಯ ಪೊಲೀಸ್ ಇಲಾಖಾ ಸಿಬ್ಬಂದಿ ವರ್ಗದವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಸದರಿ ವಾಹನಗಳನ್ನು ಕರ್ನಾಟಕ ಅರಣ್ಯ 1963ರ ಸೆಕ್ಷನ್ 71(ಎ) ಪ್ರಕಾರ ಕ್ರಮ ಜರುಗಿಸುವಂತೆ ಈ ಕಾರ್ಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ವಿವರ ಈ ಕೆಳಗಿನಂತಿದೆ.

| ಕ್ರ. ಸಂ. | ವಾಹನಗಳ ವಿವರ | ಪೊಲೀಸ್ / ಅರಣ್ಯ ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಚೇಸಿ ಸಂಖ್ಯೆ |
|---|---|---|---|---|
| 1 | Calibar Motor Cycle No. MH-14, AD-9923 | 52/2005 | DDMBKFO 2832 | DFBKFO 2001 |

ಈ ಮೇಲೆ ತೋರಿಸಿರುವ ವಾಹನದ ಬಗ್ಗೆ ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನದ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನದ ಬಗ್ಗೆ ಅಧಿಕೃತ ಹಕ್ಕು ಬಾದ್ಯತೆಗಳನ್ನು ಕೆಳ ಸಹಿ ಮಾಡಿರುವರ ಸಮ್ಮುಖದಲ್ಲಿ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟಿನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನಗಳನ್ನು ಶ್ರೀಗಂಧ ಮತ್ತು ಇತರೆ ಅರಣ್ಯ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡಲು ಉಪಯೋಗಿಸಿದ್ದಕ್ಕಾಗಿ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳ ಅಧಿಕೃತ ಸಮಜಾಯಿಸಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳ ಸಹಿ ಮಾಡಿದವರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲಿನ ವಾಹನಗಳ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳ ಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನವನ್ನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71 (ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

**ಪ್ರಭಾಷ ಚಂದ್ರ ರೇ**
ಪಿ.ಆರ್. 849 ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಪ್ರಾದೇಶಿಕ ಅರಣ್ಯ ವಿಭಾಗ, ಬೀದರ್

## ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)
## ಸಹಾಯಕ ಕಾರ್ಯನಿರ್ವಾಹಕ ಅಭಿಯಂತರವರ ಕಛೇರಿ ಸಣ್ಣ ನೀರಾವರಿ ಉಪ ವಿಭಾಗ, ಗುಲ್ಬರ್ಗ
## ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005 (ಭಾರತ ಸರ್ಕಾರ)

**ಕೈಪಿಡಿ-1:** ಸಂಸ್ಥೆಯ ವಿವರಗಳು ಮತ್ತು ಕರ್ತವ್ಯ ಮತ್ತು ವಿಧಿಗಳು.

ಸಂಸ್ಥೆಯ ವಿವರಗಳು ಮತ್ತು ಕರ್ತವ್ಯ ಮತ್ತು ವಿಧಿಗಳು

ಸಣ್ಣ ನೀರಾವರಿ ಉಪ-ವಿಭಾಗ, ಗುಲ್ಬರ್ಗಾ ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಗುಲ್ಬರ್ಗಾ ಇವರ ಅಧೀನದಲ್ಲಿ ಕೆಲಸ ನಿರ್ವಹಿಸುತ್ತದೆ. ಈ ಉಪ-ವಿಭಾಗದಡಿಯಲ್ಲಿ ದಿನಾಂಕ:1.4.2005ರ ಪ್ರಕಾರ ಒಟ್ಟು 30 ಸಣ್ಣ ನೀರಾವರಿ ಯೋಜನೆಗಳು ಅಸ್ತಿತ್ವದಲ್ಲಿವೆ. ಇವುಗಳಿಂದ ಒಟ್ಟು 11459 ಹೆಕ್ಟೇರ್ ಭೂಮಿಗೆ ನೀರಾವರಿಯಾಗುವ ಅಚ್ಚುಕಟ್ಟು ಪ್ರದೇಶ ಹೊಂದಿದೆ.

1) ಗುಲ್ಬರ್ಗಾ-6121
2) ಚಿತ್ತಾಪೂರ-2931
3) ಜೇವರ್ಗಿ-2407

ಈ ಉಪ-ವಿಭಾಗದ ಕಾರ್ಯವ್ಯಾಪ್ತಿಯು ಗುಲ್ಬರ್ಗಾ ಜಿಲ್ಲೆಯ ಗುಲ್ಬರ್ಗಾ/ಚಿತ್ತಾಪೂರ/ಜೇವರ್ಗಿ ಈ 3 ತಾಲ್ಲೂಕಿನಲ್ಲಿನ 40 ಹೆಕ್ಟೇರ್‌ಗಿಂತ ಅಧಿಕ ಹಾಗೂ ಹೆಕ್ಟೇರ್‌ಗಿಂತ ಕಡಿಮೆ ಅಚ್ಚುಕಟ್ಟು ಬರುವ ಸಣ್ಣ ನೀರಾವರಿ ಕೆರೆ, ಜಿನಗು, ಕೆರೆ, ಏತ ನೀರಾವರಿ ಯೋಜನೆ, ಅಣೆಕಟ್ಟು, ಬ್ಯಾರೇಜ್ ಹಾಗೂ ಬ್ಯಾರೇಜ ಒಳಗೊಂಡ ಸೇತುವೆಗಳ ನಿರ್ಮಾಣ ಮತ್ತು ಅವುಗಳ ನಿರ್ವಹಣೆಗೊಂಡು ಕಾರ್ಯಭಾರ ಹೊಂದಿರುತ್ತದೆ.

ಗುಲ್ಬರ್ಗಾ ಜಿಲ್ಲೆಯ ಗುಲ್ಬರ್ಗಾ/ಚಿತ್ತಾಪೂರ/ಜೇವರ್ಗಿ ತಾಲ್ಲೂಕುಗಳು ಕರ್ನಾಟಕದ ಅತ್ಯಂತ ಹಿಂದುಳಿದ ತಾಲ್ಲೂಕುಗಳಾಗಿದ್ದು ಪ್ರಾದೇಶಿಕ ಅಸಮತೋಲನೆಯು ಕೂಡ ಒಂದು ಪ್ರಮುಖ ಕಾರಣವಾಗಿರುತ್ತದೆ. ಈ ಭಾಗದ ಶೇಕಡಾ 90 ರಷ್ಟು ರೈತರು ಪ್ರಮುಖವಾಗಿ ಮಳೆ ಮೇಲೆಯೇ ಅವಲಂಬಿತರಾಗಿದ್ದು, ಇತ್ತೀಚಿನ ವರ್ಷಗಳಲ್ಲಿ ಮಳೆ ಪ್ರಮಾಣ ಅತ್ಯಂತ ಕಡಿಮೆಗೊಂಡು ಪ್ರತಿ ವರ್ಷವು ಬರಗಾಲದ ಸಮಸ್ಯೆ ಎದುರಾಗುತ್ತಿದೆ. ದಿನಾಂಕ: 1.4.2004ರ ಪ್ರಕಾರ 30 ಸಣ್ಣ ನೀರಾವರಿ ಯೋಜನೆಗಳು ಅಸ್ತಿತ್ವದಲ್ಲಿದ್ದವು. ಇವುಗಳಿಂದ 11459 ಹೆಕ್ಟೇರ್ ಭೂಮಿಗೆ ನೀರಾವರಿ ಸೌಲಭ್ಯ ಕಲ್ಪಿಸಲಾಗಿದೆ.

ಈ ಉಪ-ವಿಭಾಗವು ಗುಲ್ಬರ್ಗಾ, ಚಿತ್ತಾಪೂರ ಹಾಗೂ ಜೇವರ್ಗಿ ತಾಲ್ಲೂಕುಗಳಿಗೆ ಸಂಬಂಧಿಸಿದ್ದು, ಈ ತಾಲ್ಲೂಕುಗಳಲ್ಲಿ ಬರುವ ಎಲ್ಲಾ ಸಣ್ಣ ನೀರಾವರಿ ಯೋಜನೆಗಳ ನಿರ್ಮಾಣ, ಉಸ್ತುವಾರಿ ಹಾಗೂ ನಿರ್ವಹಣೆಯನ್ನು ನೋಡಿಕೊಳ್ಳುತ್ತದೆ.

ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ಉಪ-ವಿಭಾಗದ ಮುಖ್ಯಸ್ಥರಾಗಿರುತ್ತಾರೆ. ಇವರ ಕಛೇರಿಯಲ್ಲಿ ಮುಖ್ಯವಾಗಿ ಎರಡು ಶಾಖೆಗಳು ಕಾರ್ಯನಿರ್ವಹಿಸುತ್ತಿರುತ್ತದೆ.

1) ಆಡಳಿತ ಶಾಖೆ
2) ತಾಂತ್ರಿಕ ಶಾಖೆ

**(1) ಆಡಳಿತ ಶಾಖೆ:** ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ಉಪ-ವಿಭಾಗ, ಗುಲ್ಬರ್ಗಾ ಕಛೇರಿಯಲ್ಲಿ ಮಂಜೂರಾಗಿರುವ 18 ಹುದ್ದೆಗಳ ಪೈಕಿ ಎಲ್ಲಾ ಅಧಿಕಾರಿ ಸಿಬ್ಬಂದಿಯವರು ಕಾರ್ಯನಿರ್ವಹಿಸುತ್ತಿರುತ್ತಾರೆ. ಈ ಸಂಖ್ಯೆಗಳ ಪೈಕಿ ಹಾಲಿ ಕಾರ್ಯನಿರ್ವಹಿಸುತ್ತಿರುವ ವರ್ಗ 'ಎ' 1 ನೌಕರರು, ವರ್ಗ 'ಬಿ' 4, ವರ್ಗ 'ಸಿ' 9 ಮತ್ತು ವರ್ಗ 'ಡಿ' 4 ಸಂಖ್ಯೆಗಳಾಗಿರುತ್ತವೆ.

ಪ್ರಥಮ ದರ್ಜೆ ಸಹಾಯಕರು ಆಡಳಿತ ಶಾಖೆ ಮುಖ್ಯಸ್ಥರಾಗಿದ್ದು, ಆಡಳಿತಕ್ಕೆ ಸಂಬಂಧಪಟ್ಟಂತೆ ನೌಕರರ ಸೇವಾ ವಿವರಗಳು ಭವಿಷ್ಯ ನಿಧಿಗಳ ದಾಖಲೆಗಳನ್ನು ನಿರ್ವಹಿಸುವುದು. ವಿಚಾರಣೆ, ವಿದ್ಯುಚ್ಛಕ್ತಿ ಮತ್ತು ದೂರವಾಣಿ ಬಿಲ್ಲುಗಳನ್ನು ಪಾವತಿಸುವುದು. ದಾಖಲೆಗಳನ್ನು ಸಂಗ್ರಹಿಸಿ ಕಾಪಾಡುವುದು.

**ನಿರ್ವಹಿಸುವ ಸಂಕ್ಷಿಪ್ತ ಕೆಲಸದ ವಿವರವನ್ನು ಈ ಕೆಳಗೆ ನೀಡಲಾಗಿದೆ.**

1) ಆಡಳಿತ ಶಾಖೆಯು ಆಡಳಿತಕ್ಕೆ ಸಂಬಂಧಪಟ್ಟಂತೆ ನೌಕರರ ಸೇವಾವಿವರಗಳು, ವಿದ್ಯುಚ್ಛಕ್ತಿ ಮತ್ತು ದೂರವಾಣಿ ಸಂಬಂಧಿಸಿದ ಸಾದಿಲ್ವಾರು ಬಿಲ್ಲುಗಳನ್ನು ತಯಾರಿಸಿ ಪಾವತಿಸುವುದು.
2) ನಗದು ಮತ್ತು ಸ್ವೀಕೃತಿ ಮತ್ತು ರವಾನೆ ಶಾಖೆಯು ದಾಖಲೆಗಳನ್ನು ನಿರ್ವಹಿಸುವುದು. ಸೇವಾ ಅಂಚೆ ಚೀಟಿಗಳ ದಾಖಲೆ ನಿರ್ವಹಣೆ ದೈನಂದಿನ ಪತ್ರಗಳನ್ನು ರವಾನಿಸುವುದು. ಹಾಗೂ ಸ್ವೀಕರಿಸುವುದು ಇತ್ಯಾದಿ ಕೆಲಸಗಳನ್ನು ನಿರ್ವಹಿಸುತ್ತದೆ.
3) ನೌಕರರ ಶಿಸ್ತು ಪ್ರಕರಣ ಮತ್ತು ಅವ್ಯವಹಾರದ ಬಗ್ಗೆ ಮುಂದಿನ ಕ್ರಮಕ್ಕಾಗಿ ಕಾರ್ಯನಿರ್ವಾಹಕ ಅಭಿಯಂತರವರಿಗೆ ವರದಿ ಸಲ್ಲಿಸುವುದು ಇತ್ಯಾದಿ ಕೆಲಸವನ್ನು ನಿರ್ವಹಿಸುತ್ತದೆ.
4) ಉಗ್ರಾಣ ಶಾಖೆಯ ಕಾರ್ಯಭಾರವನ್ನು ದ್ವಿತೀಯ ದರ್ಜೆ ಸಹಾಯಕರು ನೋಡಿಕೊಳ್ಳುತ್ತಿದ್ದಾರೆ. ಈಗ ಸರ್ಕಾರದವತಿಯಿಂದ ಕಾಮಗಾರಿಗಾಗಿ ಯಾವುದೇ ಸಾಮಗ್ರಿಗಳನ್ನು ಖರೀದಿಸುತ್ತಿಲ್ಲವಾದ್ದರಿಂದ ಈ ಶಾಖೆಗೆ ಹೆಚ್ಚು ಮಹತ್ವ ಇರುವುದಿಲ್ಲ. ಅಲ್ಲದೇ ಹಾಲಿ ಇರುವ ಸಾಮಗ್ರಿಗಳ ವಹಿ ಇತ್ಯಾದಿಗಳನ್ನು ಈ ಶಾಖೆಯಲ್ಲಿ ನಿರ್ವಹಿಸಲಾಗುತ್ತದೆ. ಅಲ್ಲದೇ ಯಂತ್ರೋಪಕರಣಗಳ ನಿರ್ವಹಣೆ ಮತ್ತು ನಿಯತಕಾಲಿಕ ವರದಿಗಳನ್ನು ಸಲ್ಲಿಸುವ ಜವಾಬ್ದಾರಿಯು ಈ ಶಾಖೆಗೆ ಸಂಬಂಧಿಸಿರುತ್ತದೆ.

**(4) ತಾಂತ್ರಿಕ ಶಾಖೆ:** ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು ಇವರು ಈ ಉಪ-ವಿಭಾಗ ಕಾರ್ಯಾಲಯದ ತಾಂತ್ರಿಕ ವಿಷಯಗಳಿಗೆ ಸಂಬಂಧಪಟ್ಟ ಎಲ್ಲಾ ಕಾರ್ಯಗಳ ಕಾರ್ಯಭಾರವನ್ನು ಹೊಂದಿದ್ದು ಇವರಿಗೆ ಸಹಾಯಕ್ಕಾಗಿ ಸಹಾಯಕ ಇಂಜಿನೀಯರು ಮತ್ತು ಕಿರಿಯ ಇಂಜಿನೀಯರರು ಸಹಾಯಕರಿರುತ್ತಾರೆ. ಇವರ ಕಾರ್ಯ ವ್ಯಾಪ್ತಿ ಈ ಕೆಳಗಿನಂತಿರುತ್ತದೆ.

1) ಕಾಮಗಾರಿಗಳ ವಾರ್ಷಿಕ ನಿರ್ವಹಣೆ.
2) ಕಾಮಗಾರಿಗಳ ಸರ್ವೆ ಮತ್ತು ಅಂದಾಜು ಪತ್ರಿಕೆ ತಯಾರಿಸುವುದು.
3) ಪ್ರಗತಿಯಲ್ಲಿರುವ ಕಾಮಗಾರಿಗಳನ್ನು ನಿರ್ವಹಿಸುವುದು.
4) ಎಂ.ಎಂ.ಆರ್ ಮತ್ತು ಕೆ.ಡಿ.ಪಿ. ಸಭೆಗಳಿಗೆ ಪ್ರಗತಿಯ ವರದಿ ತಯಾರಿಸುವುದು.
5) ವಿಧಾನ ಸಭಾ ಮತ್ತು ವಿಧಾನ ಪರಿಷತ್ ಪ್ರಶ್ನೆಗಳಿಗೆ ಉತ್ತರಿಸುವುದು.

**ಕೈಪಿಡಿ-2 ಸಂಸ್ಥೆಯ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದ ಅಧಿಕಾರ ಮತ್ತು ವಿಧಿಗಳ ವಿವರ**

ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಕಾರ್ಯಭಾರ ಈ ಕೆಳಗಿನಂತಿದೆ.

1) ಅಂದಾಜು ಪತ್ರಿಕೆ ತಯಾರಿಸಿ ಮೇಲಾಧಿಕಾರಿಗಳಿಗೆ ಸಲ್ಲಿಸುವುದು.
2) ಎಂ.ಎಂ.ಆರ್. ಸಭೆ ನಡೆಸಿ ಕಾಮಗಾರಿಗಳ ಆರ್ಥಿಕ ಮತ್ತು ಭೌತಿಕ ಪ್ರಗತಿ ಪರಿಶೀಲನೆ ಮಾಡುವುದು.
3) ವಿಧಾನ ಸಭೆ ಮತ್ತು ವಿಧಾನ ಪರಿಷತ್ ನಡುವಳಿಯಲ್ಲಿ ಪ್ರಶ್ನೆಗಳಿಗೆ ಉತ್ತರವನ್ನು ತಯಾರಿಸಿ ಮೇಲಾಧಿಕಾರಿಗಳಿಗೆ ಸಲ್ಲಿಸುವುದು.
4) ಸರ್ಕಾರದ ನಿಗದಿತ ಸಭೆಗಳಿಗೆ ಹಾಜರಾಗುವುದು ಹಾಗೂ ಚರ್ಚಿಸಿದ ಅಂಶಗಳ ಬಗ್ಗೆ ಸೂಕ್ತ ಕ್ರಮ ತೆಗೆದುಕೊಳ್ಳುವುದು.
5) ದೈನಂದಿನ ಆಡಳಿತವನ್ನು ನಡೆಸುವುದು.
6) ಪ್ರಗತಿಯಲ್ಲಿರುವ ಕಾಮಗಾರಿಗಳ ಪ್ರಗತಿಯನ್ನು ಹಾಗೂ ಗುಣಮಟ್ಟವನ್ನು ತಪಾಸಣೆ ಮಾಡುವುದು.
7) ಉಪ-ವಿಭಾಗ ಕಛೇರಿಯಲ್ಲಿರುವ ಮಾಹಿತಿಯನ್ನು ಮಾಹಿತಿ ಪಡೆಯುವ ಹಕ್ಕಿನ ನಿಯಮ ಪ್ರಕಾರ ಕೋರಿಕೆ ಬಂದಲ್ಲಿ ಸಾರ್ವಜನಿಕರಿಗೆ ನೀಡುವುದು.
8) ಕಛೇರಿಯ ಉಳಿದ ಅಧಿಕಾರಿಗಳ ಮತ್ತು ಸಿಬ್ಬಂದಿಗಳಿಗೆ ಪ್ರತ್ಯೇಕವಾಗಿ ಸ್ವತಂತ್ರ ಅಧಿಕಾರವನ್ನು ನೀಡಿರುವುದಿಲ್ಲ. ಕಾರಣ ಅಧಿಕಾರಿಗಳು ಮತ್ತು ಸಿಬ್ಬಂದಿಗಳು ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರಿಗೆ ಕರ್ತವ್ಯ ನಿಭಾಯಿಸಲು ಸಹಾಯ ಮಾಡುವುದು ಹಾಗೂ ಸಹಕರಿಸುವುದು.

**ಕೈಪಿಡಿ-3:** ನಿರ್ಣಯ ತೆಗೆದುಕೊಳ್ಳುವಲ್ಲಿ ಪಾಲಿಸಬೇಕಾದ ವಿಧಿ ವಿಧಾನಗಳ ಮತ್ತು ಪರಿವೀಕ್ಷಣೆ ಮತ್ತು ಜವಾಬ್ದಾರಿ ವಿವರಗಳು.

ಇಲಾಖೆಯ ಕಾಮಗಾರಿಗೆ ಸಂಬಂಧಪಟ್ಟ ಕಾರ್ಯನಿರ್ವಹಿಸುವಲ್ಲಿ

1) ಲೋಕೋಪಯೋಗಿ ಇಲಾಖೆಯ ಸಂಹಿತೆ ಭಾಗ-1 ಮತ್ತು ಭಾಗ-2
2) ಕರ್ನಾಟಕ ಪಾರದರ್ಶಕ ನಿಯಮ 2000
3) ಲೋಕೋಪಯೋಗಿ ಲೆಕ್ಕ ಸಂಹಿತೆ ಭಾಗ-1 ಮತ್ತು ಭಾಗ-2 ನ್ನು ಅನುಸರಿಸಲಾಗುವುದು.
4) ಭೂಸ್ವಾಧೀನ ಕಾಯ್ದೆ
5) ಉಗ್ರಾಣ ಕೈಪಿಡಿ
6) ಮಧ್ಯಸ್ಥಿಕೆ ಕಾಯ್ದೆಗಳನ್ನು ಅನುಸರಿಸಲಾಗುತ್ತಿದೆ.

**ನೀರಾವರಿ ಕಾಮಗಾರಿಗಳ ನಿರ್ವಹಣೆಯಲ್ಲಿ**

1) ಕರ್ನಾಟಕ ನೀರಾವರಿ ಕಾಯ್ದೆ
2) ಕರ್ನಾಟಕ ನೀರಾವರಿ (ನೀರಿನ ಕರ ವಿಧಿಸುವುದು) ನಿಯಮ 1965
3) ನೀರಾವರಿ ಕೈಪಿಡಿ 1974

ಇವುಗಳನ್ನು ಅನುಸರಿಸಲಾಗುತ್ತಿದೆ.

ವಿಭಾಗ ಕಛೇರಿಯಲ್ಲಿ ಮಂಜೂರಾದ ಒಪ್ಪಂದದ ಪತ್ರದನ್ವಯ ಗುತ್ತಿಗೆದಾರರಿಗೆ ನಿವೇಶನವನ್ನು ಹಸ್ತಾಂತರಿಸಿ ಕೆಲಸವನ್ನು ಅನುಷ್ಠಾನಗೊಳಿಸಲು ಮಾರ್ಕಔಟ ನೀಡಿ ಕೆಲಸ ಚಾಲನೆ ಮಾಡಲಾಗುತ್ತದೆ. ಸಂಬಂಧಿಸಿದ ಸಹಾಯಕ / ಕಿರಿಯ ಅಭಿಯಂತರರು, ದೈನಂದಿನ ನಿವೇಶನಕ್ಕೆ ಹೋಗಿ ಕೆಲಸದ ಉಸ್ತುವಾರಿಯನ್ನು ನೋಡಿಕೊಳ್ಳುತ್ತಾರೆ. ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು ಆಗಿಂದಾಗ್ಗೆ ನಿವೇಶನಕ್ಕೆ ಭೇಟಿ ನೀಡಿ ಕೆಲಸವನ್ನು ಪರಿವೀಕ್ಷಿಸುತ್ತಾರೆ. ಹಾಗೆಯೇ ಕಾರ್ಯನಿರ್ವಾಹಕ ಅಭಿಯಂತರರು, ಅಧೀಕ್ಷಕ ಅಭಿಯಂತರರು ಮತ್ತು ಮುಖ್ಯ ಇಂಜಿನಿಯರರು ನಿವೇಶನಕ್ಕೆ ಭೇಟಿ ನೀಡಿ ಸಲಹೆ ಸೂಚನೆ ನೀಡುತ್ತಾರೆ. ಪ್ರಗತಿಯನ್ನು ಪರಿಶೀಲಿಸಲು ಕಾರ್ಯನಿರ್ವಾಹಕ ಅಭಿಯಂತರರು ಮತ್ತು ಅಧೀಕ್ಷಕ ಅಭಿಯಂತರರ ಮಟ್ಟದಲ್ಲಿ ಸಭೆ ನಡೆಸಲಾಗುತ್ತಿದೆ.

ವರ್ಷದಲ್ಲಿ ಒಂದು ಸಲ ಮುಖ್ಯ ಅಭಿಯಂತರರ ಕಛೇರಿ ಹಾಗೂ ಅಧೀಕ್ಷಕ ಅಭಿಯಂತರರ ಮತ್ತು ಕಾರ್ಯನಿರ್ವಾಹಕ ಅಭಿಯಂತರರು ಕಛೇರಿಯಿಂದ ಉಪ-ವಿಭಾಗದ ತಪಾಸಣೆ ನಡೆಯುತ್ತದೆ. ಕಳಪೆ ಕಾಮಗಾರಿಯ ಬಗ್ಗೆ ಏನಾದರೂ ಅರ್ಜಿ ಬಂದಲ್ಲಿ ಮಾನ್ಯ ಲೋಕಾಯುಕ್ತರೂ ಕೂಡ ನಿವೇಶನವನ್ನು ಪರಿವೀಕ್ಷಣೆ ಮಾಡಿ ಏನಾದರೂ ಕಳಪೆ ಕಾಮಗಾರಿ ಇದ್ದಲ್ಲಿ ಸೂಕ್ತಕ್ರಮಕ್ಕೆ ಶಿಫಾರಸ್ಸು ಮಾಡುತ್ತಾರೆ.

**ಕೈಪಿಡಿ-16:-** ಇಲಾಖೆಯಲ್ಲಿರುವ ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು, ಪದನಾಮ ಮತ್ತು ಇತರ ವಿವರಗಳು.

ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು ಮತ್ತು ಪದನಾಮ:

ಸಾರ್ವಜನಿಕರು ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ಉಪ-ವಿಭಾಗ, ಗುಲ್ಬರ್ಗಾ.

ಇವರ ವ್ಯಾಪ್ತಿಯಲ್ಲಿ ಲಭ್ಯವಿರುವ ಸವಲತ್ತುಗಳನ್ನು ಪಡೆಯಲು ಶ್ರೀ ಖಬೂಲಾ ಹುಸೇನಿ. ಪ್ರ.ದ. ಸಹಾಯಕರು, ಇವರಿಗೆ ಅರ್ಜಿ ನೀಡುವುದು ಅಥವಾ ಸಂಪರ್ಕಿಸುವುದು.

**ಕೈಪಿಡಿ-17:-** ಇತರೆ ವಿವರಗಳು.

**ಡಿ.ಆರ್. ರಾಮಚಂದ್ರ**
ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು,
ಸಣ್ಣ ನೀರಾವರಿ ಉಪ-ವಿಭಾಗ, ಗುಲ್ಬರ್ಗಾ.

ಪಿ.ಆರ್. 850

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರ. ಸಂ.ಕಾಅದಾ:ಕಾನಪ:ಸಿಆರ್-74/06, ದಿನಾಂಕ: 10ನೇ ಏಪ್ರಿಲ್ 2006**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

1. ಕು।। ಚಿಮಣಿ
2. ಶ್ರೀಮತಿ ಸಾಗಿ ಬಾಬು ಹೊನ್ನುಫೋಂಡಿ
3. ಬಾಬು ಹೊನ್ನು ಫೋಂಡಿ

**ವಾಸ:** ಹೊಸಹಳ್ಳಿ ಗ್ರಾಮ ಯಲ್ಲಾಪುರ ತಾಲ್ಲೂಕು
ಉತ್ತರ ಕನ್ನಡ ಜಿಲ್ಲೆ.

**ಪ್ರತಿವಾದಿಗಳು:**

1. ಮಾಲೀಕರು
ಮೆ।। ಭಾರತ್ ಮೈನ್ಸ್ ಮಾಸನ ಕೆರೆ ಗ್ರಾಮ,
ದಾವಣಗೆರೆ ತಾಲ್ಲೂಕು.

**ಪ್ರಕಟಣೆ**

ಶ್ರೀಮತಿ 1) ಕು|| ಚಿಮಣಿ, (2) ಶ್ರೀಮತಿ ಸಾಗಿಬಾಬು ಹೊನ್ನುಪೊಂಡಿ, (3) ಬಾಬು ಹೊನ್ನು ಪೊಂಡಿ ಇವರುಗಳಾದ ತಾವು ಮೃತ ಕೊಂಡು ಪೋಂಡಿ ಇವರ ತಂಗಿ ಮತ್ತು ತಾಯಿ ತಂದೆ ಎಂದೂ, ಅವರು ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಕೊಂಡು ಪೊಂಡಿ ರವರು ಒಂದನೇ ಪ್ರತಿವಾದಿಗಳಾದ ಮಾಲೀಕರು ಭಾರತ್ ಮೈನ್ಸ್ ಇವರ ಲಾರಿಯಲ್ಲಿ ಲೋಡರ್ ಅನ್ ಲೋಡರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**

ಪಿ.ಆರ್. 851

ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು,
ಕಾರ್ಮಿಕ ನಷ್ಟ ಪರಿಹಾರ ದಾವಣಗೆರೆ ಜಿಲ್ಲೆ, ದಾವಣಗೆರೆ.

**ತಹಶೀಲ್ದಾರ್‌ರವರ ಕಾರ್ಯಾಲಯ, ಬೆಂಗಳೂರು, ಪೂರ್ವ ತಾಲ್ಲೂಕು, ಕೆ.ಆರ್. ಪುರ**

**ಸಂಖ್ಯೆ:ಎನ್‌ಸಿಆರ್.ಸಿಆರ್:133:05-06, ದಿನಾಂಕ: 20ನೇ ಏಪ್ರಿಲ್ 2006**

**ಸಾರ್ವಜನಿಕ ಪ್ರಕಟಣೆ**

**ನಮೂನೆ-27**

**94ನೇ ನಿಯಮದ 68(1)ನೇ ಪ್ರಕರಣದ ಮೇರೆಗಿನ ಘೋಷಣೆ**

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸಾರ್ವಜನಿಕ ಬಂಡಿ ಮಾರ್ಗದ ಜಮೀನು ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡು ಬಂದಿರುವುದರಿಂದ,

ಈಗ ಕರ್ನಾಟಕ ಭೂ ಕಂದಾಯ ಅಧಿನಿಯಮದ 1964ರ 68ನೇ ಪ್ರಕರಣದ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸಾರ್ವಜನಿಕ ಬಂಡಿ ಮಾರ್ಗದ ಜಮೀನು ಸದರಿ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಸಾರ್ವಜನಿಕ ಬಂಡಿ ಮಾರ್ಗದ ಭಾಗದಲ್ಲಿ ಅಥವಾ ಅದರ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದ್ದೆಂದು ಉದ್ದೇಶಿಸಿ ಈ ಮೂಲಕ ಘೋಷಿಸುತ್ತದೆ.

2. ಸಾರ್ವಜನಿಕ ಬಂಡಿ ಮಾರ್ಗದ ಜಮೀನ ಹಕ್ಕಿನ ಜೊತೆಗೆ ಸದರಿ ಬಂಡಿ ಮಾರ್ಗದ ಜಮೀನು ಸದರಿ ಭಾಗದಲ್ಲಿ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವನೇ ಸಾರ್ರಜನಿಕನು ಅಥವಾ ಯಾವನೇ ವ್ಯಕ್ತಿಯು, ಈ ಅಧಿಸೂಚನೆಯನ್ನು ಹೊರಡಿಸಿದ ತೊಂಬತ್ತು (90) ದಿನದೊಳಗೆ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು, ಅಂಥ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂತಹ ಹಿತಾಸಕ್ತಿ ಅಥವಾ ಹೆಚ್ಚಿನ ಬಗ್ಗೆ ನಷ್ಟ ಪರಿಹಾರಕ್ಕಾಗಿ ಕ್ಲೈಮ್ ಮಾಡಲಾದ ಮೊಬಲಗು ಮತ್ತು ವಿವರಗಳನ್ನು ಜಿಲ್ಲೆಯ ಡೆಪ್ಯೂಟಿ ಕಮಿಷನರಿಗೆ ಬರಹದಲ್ಲಿ ತಿಳಿಸತಕ್ಕದ್ದು. ಮತ್ತು ಸದರಿ ಆಕ್ಷೇಪಣೆಗಳನ್ನು ಮತ್ತು ಕ್ಲೈಮ್‌ಗಳನ್ನು ಸದರಿ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಡೆಪ್ಯೂಟಿ ಕಮಿಷನರರು ಪರಿಶೀಲಿಸತಕ್ಕದ್ದು.

**ಅನುಸೂಚಿ**

| | | |
|---|---|---|
| ಭಾಗ ಇತ್ಯಾದಿ ಇರುವ ಗ್ರಾಮಗಳು | : | ವೈಟ್ ಫೀಲ್ಡ್ ಗ್ರಾಮದ ಸ.ನಂ.11:3ಎ, 11:3ಬಿ |
| ತಾಲ್ಲೂಕು | : | ಬೆಂಗಳೂರು ಪೂರ್ವ |
| ಜಿಲ್ಲೆ | : | ಬೆಂಗಳೂರು ನಗರ |
| ರಸ್ತೆಯ ಮೊದಲಾದುದರ ಭಾಗ ಅಥವಾ ಭಾಗಗಳ ವರ್ಣನೆ | : | ಸ.ನಂ.11:3ಎ, 11:3ಬಿ ರ 0-18 ಗುಂಟೆ ಸರ್ಕಾರಿ ಬಂಡಿ ದಾರಿ ಜಮೀನಿನ ಬಾಬ್ತು |
| ರಸ್ತೆಯ ಭಾಗ ಅಥವಾ ಭಾಗಗಳ ಸರಿ ಸುಮಾರು ವಿಸ್ತೀರ್ಣ | : | -"- |
| ಮೇರೆ | : | ಉ: ಸ.ನಂ. 06 ಜಮೀನು ಮತ್ತು 11:3ಎ ಜಮೀನು<br>ದ: ಸ.ನಂ. 12 ಜಮೀನು ಮತ್ತು 12ರ ಜಮೀನು<br>ಪೂ: ಸ.ನಂ. 11:2 ಜಮೀನು ಮತ್ತು 11:3ಎ ಜಮೀನು |
| ಸಾರ್ವಜನಿಕ ರಸ್ತೆ : ಬೀದಿ : ಗಲ್ಲಿ: ದಾರಿ ಅಥವಾ ಅದರ ಭಾಗ. | : | ದ: 11:3ಬಿ ಮತ್ತು ರಸ್ತೆ ಮತ್ತು 113:1ಎ ಜಮೀನು<br>ವೈಟ್ ಫೀಲ್ಡ್ ಮುಖ್ಯ ರಸ್ತೆಯಿಂದ ಹಗದೂರಿಗೆ ಹಾದು ಹೋಗುವ ಹಾಲಿ ಬಂಡಿ ಮಾರ್ಗವನ್ನು ಸದರಿ ಜಮೀನುಗಳ ದಕ್ಷಿಣ ಭಾಗದ ಎಲ್ಲೆ ಕಟ್ಟಿನಲ್ಲಿ ಹಾದು ಹೋಗುವಂತೆ. |

ತಹಶೀಲ್ದಾರ್,

ಪಿ.ಆರ್. 818

ಬೆಂಗಳೂರು ಪೂರ್ವ ತಾಲ್ಲೂಕು, ಕೃಷ್ಣರಾಜಪುರ.

**KARNATAKA ADMINISTRATIVE TRIBUNAL**
**NOTIFICATION**
**No.KAT/EST(1)/RI. ACT 2000/27/2001, dated: 28th April 2006**

In exercise of the powers conferred under Section 4(b) of the Right to Information Act, 2005 (Central Act No.22/2005) the detailed information relating to the Karnataka Administrative Tribunal is published as hereunder for the information of the general public.

| | | | |
|---|---|---|---|
| 1. | Particulars of Organisation Functions & Duties | : | Organisation: Karnataka Administrative Tribunal.<br>Functions & Duties : Adjudication or trial of disputes and complaints with respect to recruitment and conditions of service of persons appointed to public services and posts in connection with the affairs of State of Karnataka. |
| 2. | Powers and Duties of its officers & employees | : | Details are furnished as Annexure-IA & IB |
| 3. | The procedure followed in the decision making process, including channels of supervision and accountability | : | The applications filed into the Tribunal by the Advocates/parties concerned, in the first instance, will be scrutinized in the Scrutiny Branch of the Tribunal. Thereafter, the applications will be posted before the appropriate Bench of the Tribunal for admission, disposal/adjudication etc. The applications, after admission etc., will be sent to Pending Section where the files containing applications will be maintained till they are finally disposed of. Once the applications are disposed of by the Tribunal, the copies of the judgment will be sent to the parties concerned through Copying Section. Thereafter the records pertaining to the applications will be sent to the Records Section for maintenance.<br>All the above functions of the Tribunal will be carried out under the general supervision of Hon'ble Chairman in general and Registrar in particular through various Officers of the Tribunal, like Deputy Registrar, Assistant Registrars, Court Officers, Section officers, PS/JW,etc. |
| 5. | The norms set by it for the discharge of its functions. | : | The applications filed into the Tribunal are as far as possible, are to be disposed of within six months from the date of their filing. |
| 6. | The Rules, Regulations instructions, manuals & records, held by it or under its control or used by its employees for discharging its functions | : | See Annexure-II |
| 7. | Statement of the categories of documents that areheld by it or under its control | : | Applications filed into the Tribunal (Main Applications, Review Applications, Contempt Applications, Miscellaneous applications, copies of judgment/orders, Note-sheet orders, Register No.1 – Register of Court Fee Receipts, Register No.2 –Register of unnumbered Applications, Register No.3 – Register of Applications, Register No.4 – Register of Review, Register No.5 – Register of Applications For Contempt, Register No.6 – Register of Miscellaneous applications, Register No.6-A Register of appeal against the order of Registrar, Register No.7 – Pending Register, Register No.8 – Tribunal Diary, Register No.9 Register of applications disposed of, Register No.10 – Copy application register, Register No.11 – Register showing the Dispatch of free copies in applications, Register No.13 – Register of application For return of documents, Register No.14 – Register of registered clerks in the Karnataka Administrative Tribunal. |

| | | | |
|---|---|---|---|
| 8. | The particulars of any arrangement that exists for consultation with, or representation by, the members of the public in relation to the fomulation of its policy or implementation thereof. | : | Deputy Registrar (Admn.) and Deputy Registrar (Judicial) will furnish necessary information in their respective area/ field/jurisdiction. |
| 9. | A statement of the boards, Councils, committees and other bodies consisting of two or more persons constituted as its part or for the purpose of its advice and as to whether meetings of those boards, councils, committees and other bodies are open to the public, or the minutes of such meetings are accessible for public. | : | No such statutory committee. Hence the question of giving information to public of said matters does not arise. |
| 10. | A directory of its officers and employees | : | Maintained in the Establishment Section |
| 11. | The monthly remune-ration received by each of its officers & employees including the system of compensation as provided in its regulations. | : | See Annexure-III |
| 12. | The budget allocated to each of its agency, indicating the particulars of all plans, proposed expenditures and reports on disbursements made. | : | See Annexure-IV |
| 13. | The manner of execution of subsidy programmes, including the amounts allocated and the details of beneficiaries of such programmes. | : | Not applicable |
| 14. | Particulars of recipients of concessions, permits or authorizations granted by it. | : | Not applicable |
| 15. | Details in respect of the information available to or held by it, reduced in an electronic form. | : | Electronic media is yet to be adopted in Karnataka Administrative Tribunal. |
| 16. | Particulars of facilities available to citizens for obtaining information, including the working hours of a library or reading room, if maintained for public use. | : | Library and reading room is available to public from 10.30 a.m. to 5.30 p.m. |

| | | | |
|---|---|---|---|
| 17. | The names, designations and other particulars of the Public Information Officers. | : | No Public Information officer is designated. However, information can be obtained from Sri N.A.Lokeshappa, Deputy Registrar (Judicial) and Smt. S.Saroja, Deputy Registrar (Admn.) |
| 18. | Such other information as may be prescribed. | : | Nil. |

BY ORDER OF HON'BLE THE CHAIRMAN

Registrar I/c.

**ANNEXURE-IA**

**POWERS AND DUTIES**

| | | | |
|---|---|---|---|
| 1. | Registrar | : | Registrar, Karnataka Administrative Tribunal is the head of the Karnataka Administrative Tribunal Secretariat. He functions under supervision and Guidance of Chairman, K.A.T. He is responsible for smooth functioning of the office of the Tribunal both on administrative, financial and judicial side. He is responsible for processing the applications received into the Tribunal, posting them before the appropriate Benches of the Tribunal and thereafter as and when Applications are disposed of, interim orders, notices, show cause notices, special notices, Contempt notices are issued, if ordered communicate them to the parties concerned.<br>The Registrar is also responsible on the administrative side to maintain discipline in the office including payment of salaries etc., to the staff. |
| 2. | Deputy Registrar: | : | There are two Deputy Registrars one is incharge of administrative section and the other one is incharge of Judicial sections. The Deputy Registrar incharge of Administration assist the Registrar on the office administration and Establishment side of the office. The Deputy Registrar (Judicial) will assist the Registrar on the Judicial side commencing from receiving of applications, scrutinizing them, posting the applications before the Tribunal by issuing appropriate cause list, maintaining the applications and records and communicating various types of orders of the Tribunal to the concerned. |
| 3. | Assistant Registrars: | : | There are three Assistant Registrars, one incharge of administration, the other one incharge of Judicial section, the third one incharge of Miscellaneous Sections. The Assistant Registrar (Admn.) assist the Deputy Registrar (Admn.) in establishment and administrative matters of members of the staff, Judges and officers.<br>Assistant Registrar (Judicial) will assist the Deputy Registrar (Judicial) in smooth and efficient carrying out work in judicial sections. The Assistant Registrar (Miscellaneous) will assist the Deputy Registrar (Admn.) in up-keeping the office and its premises including House Keeping/Vehicles/Library. |
| 4. | Court Officers: | : | There are four Court Officers. They will assist the Bench in smooth conduct of proceedings in Court Halls. Their main duty is to call the cases, record the proceedings of the Court in the relevant note-sheet of the file send the records and files to the sections concerned and maintain registers and records as prescribed under K.A.T. (Procedure) Rules, 1986 and K.A.T. Rules of Practice, 1990. |

5. Section Officers: : There are six Section Officers each one of them heading Sections:

Establishment, Pending, Board, Scrutiny and Appeals, Copying, Stores & House Keeping, Library Section.

The Section Officer, Establishment, is responsible for maintaining service records of staff of the Tribunal and also responsible for extending them all the service benefits they are entitled for.

The Section Officer, Stores Section, is responsible for House keeping and up-keeping of Tribunal and its premises, maintenance of vehicles, attending to protocal duty.

The Section Officer, Library Section, is responsible for maintenance of Library including purchasing of books, subscribing to journals, up-dating of Acts, Rules etc.

**The Section officer, Board, Scrutiny and Appeals** is responsible for receiving various types of applications filed into the Tribunal, scrutinizing them and thereafter posting them before the appropriate Benches of the Tribunal by way of preparing cause list - Daily, Weekly, Monthly, etc.

**The Section Officer, Pending Section**, is responsible for maintaining the files received from Court Halls till they are disposed of, noting stages of the applications in the file, communication of Interim orders, issue of notices, show cause notices, warrants – bailable/non-bailable and custodian of the files containing applications till they are finally disposed of and assisting the Board Branch in preparing the cause list of applications to be posted before the Tribunal as per the orders of the Tribunal noted in the note-sheet of the file.

**S.O. , Copying Section:** The main duties and functions of the Copying section is to communicate the final orders, interim orders of the Tribunal to the parties concerned – the applicants as well as the respondents, issue of certified copies to persons who desires to obtain such copies on payment of cost as fixed. Maintenance of master copy of the judgments.

**Despatch Section:** This section is responsible for receiving all inward tappals and sending out-ward tappals to the concerned.

**K.S.L.J. Section:** This section is responsible for Printing, publications and sale of K.S.L.J. which has been suspended for the time being.

**Accounts Section:** This Section is headed by Accounts Superintendent drawn by the State Accounts Department who is responsible for preparation of monthly pay bill, other payments to various organizations, maintenance of Cash Book, Cash, preparation of budget, etc.

**Records Section:** This section is headed by a Record Keeper who is responsible for receiving the files containing applications along with autograph of the judgments of applications dis-posed of, indexing of files, destruction of records, maintenance of autographs of judgments are its other duties.

